ವ್ಯಕ್ತಿ ಮತ್ತು ಚಿಂತನೆಗಳು

Azim Premji University



# ಟಾಗೋರ್ – ಕಲಿಕೆಯ ಜೀವನಗಾಥೆ

ಕನ್ನಡ ಅನುವಾದ : ಗೋಪಾಲಕೃಷ್ಣ ಐ. ಮತ್ತು ಶಿವಶಂಕರ್ ಬಿ. ಪಿ.

ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ ಪ್ರಕಾಶನ

Azim Premji University

**Text:**
Selections from Tagore's own writings ( original and translations)

**Concept and Design:**
Jayshree Nair-Misra, Azim Premji University

**Illustrations:**
Biswajith Manimaran, Srishti School of Design, Bangalore.

**Translation :**
Gopalakrishna I and Shivashankar B.P, Azim Premji Foundation, District Institute, Mandya.

**Published by Azim Premji University 2013**
Printed by SCPL DESIGN, 2nd Flr | 2/1 JC Indl Area
Kanakapura Road, Bangalore - 560 062, India

# ಟಾಗೋರ್ – ಕಲಿಕೆಯ ಜೀವನಗಾಥೆ

## ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯದ ಪ್ರಕಾಶನ



"ಮಕ್ಕಳ ಪುಸ್ತಕಗಳ ಒಂದಷ್ಟು ಭಾಗ ಅವರಿಂದ ಅರ್ಥೈಸಿಕೊಳ್ಳಬಲ್ಲಂತೆಯೂ ಮತ್ತಷ್ಟು ಭಾಗ ಜಟಿಲವಾಗಿಯೂ ಇರಬೇಕು. ನಮ್ಮ ಬಾಲ್ಯದಲ್ಲಿ, ಕೈಗೆ ಸಿಗುತ್ತಿದ್ದ ಎಲ್ಲ ಪುಸ್ತಕಗಳನ್ನು ಮೊದಲಿನಿಂದ ಕೊನೆಯವರೆಗೆ ಎಡೆಬಿಡದೆ ಓದುತಿದ್ದೆವು. ಅರ್ಥವಾದದ್ದು ಮತ್ತು ಆಗದ್ದು ಎಲ್ಲವೂ, ನಮ್ಮೊಂದಿಗೆ ಮಂಥನ ನಡೆಸುತ್ತಾ ಸಾಗಿದವು"

– ರವೀಂದ್ರನಾಥ್ ಟಾಗೋರ್





# ಕಡಲತಡಿಯಲಿ

“ತುದಿ ಮೊದಲಿಲ್ಲದ ಜಗದ ಕಡಲತಡಿಯಲ್ಲಿ ಸೇರುವರು ಚಿಣ್ಣರು
ನೆತ್ತಿಯ ಮೇಲೆ ಸ್ಥಿರವಾಗಿರುವ ಅನಂತ ಆಗಸ
ಮತ್ತು ನಿರಂತರ ಉನ್ಮತ್ತತೆಯಲ್ಲಿರುವ ಜಲಧಿ.
ತುದಿ ಮೊದಲಿಲ್ಲದ ಜಗದ ಕಡಲತಡಿಯಲ್ಲಿ ಸೇರುವರು ಚಿಣ್ಣರು
ಕೇಕೆ ಹಾಕುತ್ತಾ, ಕುಣಿದಾಡುತ್ತಾ.

ಮರಳಲ್ಲಿ ತಮ್ಮ ಮನೆಯ ಕಟ್ಟುವರವರು
ಬರಿದಾದ ಶಂಖಗಳೊಡನೆ ಆಡುವರು
ಉದುರಿ ಒಣಗಿದ ಎಲೆಗಳಲ್ಲಿ ತಮ್ಮ ನೌಕೆಯ ನೇಯ್ದು
ನಗು ನಗುತ್ತಾ ತೇಲಿ ಬಿಡುವರು ವೈಶಾಲ್ಯದ ಅಂತರಾಳಕೆ
ಜಗದ ಕಡಲತಡಿಯಲ್ಲಿ ಸೇರುವರು ಚಿಣ್ಣರು”

– **ರವೀಂದ್ರನಾಥ್ ಠಾಗೋರ್**

# ಮುನ್ನುಡಿ

**“ವ್ಯಕ್ತಿ ಮತ್ತು ಚಿಂತನೆಗಳು”** ಎಂಬ ಶೀರ್ಷಿಕೆಯ ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯದ ಈ ಹೆಜ್ಜೆ, ನಮ್ಮ ಜ್ಞಾನವನ್ನು ವಿಸ್ತರಿಸುತ್ತಲೇ ಇರುವ ಸಮಾಜ ಸುಧಾರಕರು, ಕಲಾವಿದರು, ವಿಜ್ಞಾನಿಗಳು, ತತ್ವಜ್ಞಾನಿಗಳು ಮತ್ತು ಶಿಕ್ಷಣತಜ್ಞರ ಕ್ರಿಯೆ, ಬದುಕು ಮತ್ತು ಚಿಂತನೆಗಳನ್ನು ಪರಿಶೋಧಿಸುವ ಪ್ರಯತ್ನವಾಗಿದೆ. ಇಂತಹ ಪ್ರಕ್ರಿಯೆಯ ಮೂಲಕ, ನಮ್ಮ ತತ್ವ ಮತ್ತು ದೃಷ್ಟಿಗಳಿಗೆ ರೂಪ ಕೊಟ್ಟ ಚಿಂತನೆಗಳನ್ನು ಚರ್ಚಿಸುವ, ಅರ್ಥೈಸಿಕೊಳ್ಳುವ ಮತ್ತು ಅವುಗಳೊಂದಿಗೆ ತೊಡಗಿಸಿಕೊಳ್ಳುವ ವೇದಿಕೆಯೊಂದನ್ನು ಒದಗಿಸಲಾದೀತು ಎಂಬುದು ನಮ್ಮ ಆಶಯ.

ಈ ಮಾಲಿಕೆಗಳ ಸರಣಿಯನ್ನು ನಾವು ರವೀಂದ್ರನಾಥ ಠಾಗೋರರ ಶಿಕ್ಷಣತತ್ವ ಮತ್ತು ಚಿಂತನೆಗಳ ಚಿತ್ರರೂಪಿಕೆಯ ಮೂಲಕ ಆರಂಭಿಸುತ್ತಿದ್ದೇವೆ. ರವೀಂದ್ರರು ಕಾಲವನ್ನು ಮೀರಿ ನಿಂತ ಶಿಕ್ಷಣತಜ್ಞ, ಆದುದರಿಂದಲೇ ಅವರ ಚಿಂತನೆಗಳು ಅಂದಿನಷ್ಟೇ ಇಂದಿಗೂ ಪ್ರಸ್ತುತ. ಸಾಲು ಸಾಲು ಶಿಕ್ಷಕರಿಂದ ಕಲಿಸಲ್ಪಡುವಾಗ ಅಥವಾ ಒಂದು ಶಾಲೆಯಿಂದ ಇನ್ನೊಂದು ಶಾಲೆಗೆ ವರ್ಗಾವಣೆಗೊಳ್ಳುತ್ತಿದ್ದಾಗ ತಾನು ಯಾವುದೇ ರೀತಿಯ ಸಂತಸ ಅನುಭವಿಸುತ್ತಿರಲಿಲ್ಲವೆಂದು ತಮ್ಮ ಬರಹಗಳಲೆಲ್ಲಾ ರವೀಂದ್ರರು ವ್ಯಕ್ತಪಡಿಸಿದ್ದಾರೆ. ತಮ್ಮ ಶಿಕ್ಷಣ ಮಾರ್ಗವನ್ನು ಅವರ ಬದುಕಿನ ಅನುಭವಗಳಿಂದಲೇ ಕಟ್ಟಿಕೊಂಡರವರು. ವಿದ್ಯಾರ್ಥಿಗಳ ಮನಸ್ಸನ್ನು ಮುಕ್ತಗೊಳಿಸಿ, ಅವರು ವರ್ಗ - ವರ್ಣಗಳ ಭೇದವಿಲ್ಲದೆ ಎಲ್ಲ ಮನುಷ್ಯರನ್ನು ಗೌರವಿಸುವ ಕ್ರಿಯಾಶೀಲ ಐಕ್ಯದೆಡೆಗೆ ಸಾಗುವಂತೆ ಮಾಡಬೇಕು ಎಂಬ ಉದ್ದೇಶದಿಂದಲೇ ರವೀಂದ್ರರು ಶಾಂತಿನಿಕೇತನವನ್ನು ಪ್ರಾರಂಭಿಸಿದ್ದು.

ಪರಿಸರದ ಸಾಮೀಪ್ಯದಲ್ಲೇ ರವೀಂದ್ರರು ತಮ್ಮ ವಿದ್ಯಾರ್ಥಿಗಳಲ್ಲಿ ಕಲಿಕೆಯ ಮುದವನ್ನು ಬೆಳೆಸುತ್ತಿದ್ದರು. ವಿಶ್ವಭಾರತಿಯಲ್ಲಿನ ಅಸಂಖ್ಯಾತ ಸಂಭ್ರಮಗಳು ಅವರ ವಿದ್ಯಾರ್ಥಿಗಳನ್ನು ಋತುಗಳು, ಸಾಂಘಿಕ ಚಟುವಟಿಕೆ, ಸಮುದಾಯದ ಪಾಲ್ಗೊಳ್ಳುವಿಕೆ ಮತ್ತು ಸಾಂಸ್ಥಿಕ ಶಕ್ತಿಯ ವಿಚಾರಗಳ ಕುರಿತು ಶಿಕ್ಷಿತರನ್ನಾಗಿ ಮಾಡುವ ಆದರ್ಶವನ್ನು ಹೊಂದಿದ್ದವು. ಪ್ರತಿ ಮಗುವಿನಲ್ಲಿನ ಸಂಪೂರ್ಣ ಚೈತನ್ಯವನ್ನು ಹೊರಹೊಮ್ಮಿಸಬಲ್ಲಂತಹ ಸಂತಸದ ಮತ್ತು ಸುರಕ್ಷಿತ ವಾತಾವರಣವನ್ನು ಕಲ್ಪಿಸಿ ಆ ಮೂಲಕ ಪರಿಪೂರ್ಣ ಮಾನವಾಭಿವೃದ್ಧಿಯನ್ನು ರೂಪಿಸುವುದು ಅವರ ಕನಸಾಗಿತ್ತು.



ರವೀಂದ್ರರ ಬಾಲ್ಯ, ಅವರ ಚಿಂತನೆ ಮತ್ತು ನಂಬಿಕೆಗಳ ಕಿರುನೋಟವನ್ನು ನೀಡುತ್ತಾ, ಮಹಾನ್ ಚೇತನವೊಂದರ ಕಾಲದ ಎಲ್ಲೆಗಳನ್ನು ಮೀರಿದ ದರ್ಶನದ ಪಕ್ಷಿನೋಟವನ್ನು ಈ ಚಿತ್ರರೂಪಕದ ಮೂಲಕ (ಭಾಗಶಃ ಅವರದೇ ಮಾತುಗಳಲ್ಲಿ) ನೀಡುವುದೇ ನಮ್ಮ ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯದ ಆಶಯವಾಗಿದೆ.

ಈ ಚಿತ್ರರೂಪಕದಲ್ಲಿ ಬರುವ ಪಠ್ಯದ ಬಹುತೇಕ ಭಾಗಗಳು ರವೀಂದ್ರರದ್ದೇ ಆದ ಮೂಲ ಅಥವಾ ಅನುವಾದಿತ ಬರಹಗಳಿಂದ ಆಯ್ದುಕೊಳ್ಳಲಾಗಿದೆ. ಅದರಲ್ಲಿಯೂ ಉಮಾ ದಾಸ್ ಗುಪ್ತಾ ಅವರ ರವೀಂದ್ರರ ಮೇಲಿನ ಕೃತಿಯಾದ - **“ಮೈ ಲೈಫ್ ಇನ್ ಮೈ ವರ್ಡ್ಸ್”** ಪುಸ್ತಕದಿಂದ ಹೆಚ್ಚಿನ ಭಾಗಗಳನ್ನು ಪಡೆಯಲಾಗಿದೆ.

ಇಲ್ಲಿ ಬರುವ ಚಿತ್ರರೂಪಕಗಳ ವಿನ್ಯಾಸವನ್ನು ಯುವ ವಿದ್ಯಾರ್ಥಿಯೋರ್ವರು ಮಾಡಿರುತ್ತಾರೆ ಮತ್ತು ಛಾಯಾಚಿತ್ರಗಳನ್ನು ರವೀಂದ್ರ ಭವನ, ವಿಶ್ವಭಾರತಿ ಮತ್ತು ಶಾಂತಿನಿಕೇತನಗಳಿಂದ ಪಡೆಯಲಾಗಿದೆ. ವೈಯಕ್ತಿಕವಾಗಿ ಇದು ನನಗೆ ಸೂಕ್ಷ್ಮ ಮತ್ತು ಸಂವೇದನಾಶೀಲ ದಾರ್ಶನಿಕನ ಚಿತ್ತದೊಳಕ್ಕೆ ಒಂದು ಸ್ಫೂರ್ತಿದಾಯಕ ಅನ್ವೇಷಣಾ ಪಯಣವಾಗಿತ್ತು.

ಠಾಗೋರರು ಒಬ್ಬ ಸಾರ್ವಕಾಲಿಕ ಶಿಕ್ಷಣತಜ್ಞ ಮತ್ತು ಅವರ ಚಿಂತನೆಗಳು ಅವರು ಬದುಕಿದ್ದ ಕಾಲದಷ್ಟೇ ಇಂದಿಗೂ ಪ್ರಸ್ತುತ. ಪ್ರಜ್ವಲ ವ್ಯಕ್ತಿತ್ವದ ರವೀಂದ್ರರ ಬದುಕು ಮತ್ತು ವಿಚಾರಗಳು ನಮ್ಮ ವಿದ್ಯಾರ್ಥಿಗಳ, ಶಿಕ್ಷಕರ ಮತ್ತು ಸಮಾಜದ ಮನೋಧರ್ಮವನ್ನು ಪ್ರಭಾವಿಸುತ್ತಾ, ಮಂಥನವನ್ನು ಪ್ರೋತ್ಸಾಹಿಸುತ್ತಾ ಅವರಲ್ಲಿ ಬದಲಾವಣೆಯನ್ನು ಪ್ರಚೋದಿಸುತ್ತವೆ. ಈ ನಿಟ್ಟಿನಲ್ಲಿ ನಮ್ಮ “ವ್ಯಕ್ತಿ ಮತ್ತು ಚಿಂತನೆಗಳು” ಉಪಕ್ರಮವು, ಪಾರಂಪರಿಕ ವಿಚಾರಗಳನ್ನು ಉಳಿಸುವ ತನ್ನ ಅಳಿಲು ಸೇವೆಯನ್ನು ಪೂರೈಸಬಹುದು ಎಂದು ಭಾವಿಸುತ್ತೇವೆ.

**ಜಯಶ್ರೀ ನಾಯರ್ - ಮಿಶ್ರಾ**
**ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ, ಬೆಂಗಳೂರು.**

## ಚಳುವಳಿಗಳ ಅಲೆಗಳು...

1860ರ ದಶಕದಲ್ಲಿ ಬಂಗಾಳವು ಚಳುವಳಿಗಳ ಅಲೆಗಳಿಂದ ತುಂಬಿಹೋಗಿತ್ತು. ರಾಜಾ ರಾಮ ಮೋಹನ ರಾಯರು ಪಾರಂಪರಿಕ ಧಾರ್ಮಿಕ ವಿಚಾರಗಳನ್ನು ಪ್ರಶ್ನಿಸಲು ಆರಂಭಿಸಿದ್ದರು ಹಾಗೂ ತನ್ಮೂಲಕ ಶಿಷ್ಟ ಮತ್ತು ವ್ಯಾವಹಾರಿಕ ಜಗತ್ತಿನ ಆಸೆಗಳಲ್ಲಿ ಮುಚ್ಚಿಹೋಗಿದ್ದ ಆಧ್ಯಾತ್ಮಿಕ ಬದುಕಿನ ಮಾರ್ಗಗಳನ್ನು ತೆರೆಯತೊಡಗಿದ್ದರು. ಈ ವಿಷಯಗಳಲ್ಲಿ ಅವರಿಗೆ ನನ್ನ ತಂದೆ ದೇವೇಂದ್ರನಾಥ ಠಾಗೋರರ ಸಂಪೂರ್ಣ ಬೆಂಬಲವಿತ್ತು.

ಬಂಗಾಳದ ಸಾಹಿತ್ಯ ಲೋಕವು ಪುನರುಜ್ಜೀವನಗೊಳ್ಳುತ್ತಿದ್ದ ಕಾಲವದು. ಬಂಕಿಮ ಚಂದ್ರ ಚಟರ್ಜಿಯವರು ಬಂಗಾಳದ ಆಧುನಿಕ ಕೃತಿಗಳನ್ನು ರಚಿಸುತ್ತಾ, ಬಂಗಾಳಕ್ಕೆ ಅದರ ಮೋಡಿಯನ್ನು ಹಿಂತರುವುದರ ಜೊತೆಗೆ ತಾವೂ ಬೆಳಗತೊಡಗಿದ್ದರು.

ಅದು ರಾಷ್ಟ್ರೀಯ ಪುನರುತ್ಥಾನದ ಕಾಲ – ರಾಜಕೀಯ ಪಿಸುಮಾತುಗಳು, ರಾಷ್ಟ್ರೀಯತಾ ಉದ್ವೇಗಗಳು, ಎಲ್ಲರಲ್ಲೂ ಐಕ್ಯತಾ ಮನೋಭಾವ, ಭಾರತೀಯವೆಂದೆನಿಸಿದ ಎಲ್ಲದರ ಮೇಲೂ ಹೆಮ್ಮೆ – ಹೀಗೆ ಒಂದು ಹೊಸ ದೇಶವೇ ಉದಯಿಸತೊಡಗಿತ್ತು. ತಮ್ಮ ದೃಢವಾದ ಅಭಿವ್ಯಕ್ತಿಯಿಂದಾಗಿ ಭಾರತೀಯರಿಗೆ ಅವರದೇ ಆದ ಅಸ್ತಿತ್ವವೊಂದು ಅರಳತೊಡಗಿತ್ತು.





1860ರಲ್ಲಿ ಕಲ್ಕತ್ತೆ...



# ಬಾಲಕನಾಗಿ

ನಮ್ಮದೊಂದು ಅಸಾಮಾನ್ಯ ಮನೆತನವಾಗಿತ್ತು. ಕುಟುಂಬದವರೆಲ್ಲರೂ ಬರವಣಿಗೆ, ಕಲೆ, ಸಾಹಿತ್ಯ ಮತ್ತು ರಂಗಭೂಮಿಯಲ್ಲಿ ಪರಿಣತರಾಗಿದ್ದರು. ರಾಜಕೀಯ ಪ್ರಜ್ಞೆಯುಳ್ಳ, ಸಂಪ್ರದಾಯಬದ್ಧವಲ್ಲದ ಮತ್ತು ವಿವಿಧ ಸಂಸ್ಕೃತಿಗಳಿಂದ ಸಮ್ಮಿಳಿತಗೊಂಡು ಪ್ರವರ್ಧಿಸುತ್ತಿದ್ದ ಮನೆತನವಾಗಿತ್ತು. ಇಂತಹ ಮುಕ್ತ, ಮಾನವತಾವಾದಿ ಕುಟುಂಬದಲ್ಲಿ, 1861ರ ಮೇ 7 ರಂದು ಕಲ್ಕತ್ತೆಯ ಜೊರಾಸಂಕೊ ಎಂಬಲ್ಲಿ ನಾನು ಜನಿಸಿದ್ದೆ.

ನಮ್ಮ ಮನೆಯಲ್ಲಿ ಯಾವುದೇ ಬಗೆಯ ಸಾಂಪ್ರದಾಯಿಕ ಆಚರಣೆಗಳಾಗಲಿ ಅಥವಾ ಕಟ್ಟುಪಾಡುಗಳಾಗಲಿ ಇರಲೇ ಇಲ್ಲ ಅಥವಾ ಅತೀ ವಿರಳವಾಗಿದ್ದವು ಎನ್ನಬಹುದು. ಬಾಲಕನಾಗಿ ಉಪನಿಷತ್ತುಗಳ ಶ್ಲೋಕಗಳನ್ನು ಸ್ಪಷ್ಟವಾಗಿ ವಾಚಿಸುವುದನ್ನು ಕಲಿತೆ. ಶಾಸ್ತ್ರಗಳಿಗಾಗಲಿ, ಸಾಂಪ್ರದಾಯಿಕ ಆಚರಣೆಗಳಿಗಾಗಲಿ ಹೆಚ್ಚು ಒತ್ತನ್ನು ನೀಡದೆ, ನಮ್ಮ ಮನೆತನವು ಆಧ್ಯಾತ್ಮವನ್ನು ಕೇಂದ್ರವಾಗಿ ಇರಿಸಿಕೊಂಡಿತ್ತು. ನನ್ನ ತಂದೆಯವರ ಆಧ್ಯಾತ್ಮಿಕ ಜೀವನವು ಘನ ಮತ್ತು ಗಂಭೀರವಾದದ್ದಾಗಿತ್ತು.

ನಮ್ಮ ಕುಟುಂಬದ ಆದರ್ಶನೀಯವಾದ ಆಧ್ಯಾತ್ಮಿಕತೆ ನಮಗೆ ಮುಕ್ತವಾಗಿ ಮಾತನಾಡುವ, ವಿಚಾರಮಾಡುವ ಮತ್ತು ಕ್ರಿಯಾಶೀಲವಾಗಿರುವ ಸ್ವಾತಂತ್ರ್ಯವನ್ನು ಕೊಟ್ಟಿತ್ತು. ಬಂಗಾಳಿ ಸಾಹಿತ್ಯ, ಸಂಗೀತ ಮತ್ತು ಕಲೆಯನ್ನು ಪೋಷಿಸುವುದರ ಜೊತೆಜೊತೆಗೆ ವಿದೇಶೀ ಭಾಷೆ, ಸಂಸ್ಕೃತಿ ಮತ್ತು ಬದುಕನ್ನು ಗೌರವಿಸುವ ಸಹಜ ವಾತಾವರಣದಲ್ಲಿ ನಾನು ಬೆಳೆದೆ.










ನನ್ನ ಅಣ್ಣಂದಿರು ನನಗಿಂತ ಬಹಳ ದೊಡ್ಡವರಿದ್ದರು. ನಾನು ಹುಟ್ಟಿದಾಗ ದ್ವಿಜೇಂದ್ರನಾಥನಾಗಲೇ 21 ವರ್ಷ ವಯಸ್ಸಿನವನಾಗಿದ್ದರೆ, ಸತ್ಯೇಂದ್ರನಾಥನಿಗೆ 19, ಹೇಮೇಂದ್ರನಾಥನಿಗೆ 17 ಮತ್ತು ಜೋತಿರಿಂದ್ರನಾಥನಿಗೆ 13 ವರ್ಷಗಳಾಗಿದ್ದವು. ನನ್ನ ಮೇಲೆ ಗಾಢವಾಗಿ ಅಣ್ಣಂದಿರು ಪ್ರಭಾವ ಬೀರಿದ್ದರು. ದೊಡ್ಡ ಮತ್ತು ಸಾಂಪ್ರದಾಯಿಕವಾದ ಎಲ್ಲಾ ಭಾರತೀಯ ಕುಟುಂಬಗಳಲ್ಲಿ ಆಗುವಂತೆ ನಾನು ನನ್ನ ತಂದೆ ಮತ್ತು ತಾಯಿಯರನ್ನು ಕಂಡದ್ದಾಗಲಿ ಅಥವಾ ಒಡನಾಡಿದ್ದಾಗಲಿ ತೀರ ಕಡಿಮೆ. ಕೆಲಸದವರ ದೊಡ್ಡ ಪರಿವಾರ ನನ್ನನ್ನು ಮತ್ತು ನನ್ನ ಸಹೋದರರನ್ನು ಪೋಷಿಸಿ–ಪಾಲಿಸಿತು. ಮನೆಯ ಕೆಲ ಭಾಗಗಳಿಗೆ ಮಕ್ಕಳಿಗೆ ಪ್ರವೇಶವಿರಲಿಲ್ಲ. ಕಿಟಕಿಯ ಸರಳುಗಳಾಚೆ ಇಣಿಕಿ ಅನಂತವಾದ ಬಾಹ್ಯ ಜಗತ್ತನ್ನು ನೋಡುತ್ತಾ ಆನಂದಿಸುತ್ತಿದ್ದೆ. ಆ ಹೊರ ಜಗತ್ತಿನ ನೋಟ, ಶಬ್ದಗಳು ಮತ್ತು ಸುಗಂಧಗಳು ನನ್ನನ್ನು ಬಹುವಾಗಿ ಆಕರ್ಷಿಸಿದ್ದವು.

ಸಾವಕಾಶವಾಗಿ ನನ್ನ ಬಾಲ್ಯದ ದಿನಗಳು ಅರಳುತ್ತಾ ಹೋದವು. ನಾನು ಸುಮಾರು 7–8 ವರ್ಷದವನಾಗಿದ್ದಾಗ "ಕೌಂಟಿಂಗ್ ಹೌಸ್" ನ (ಲೆಕ್ಕಾಚಾರದ ಮನೆ) ಬಳಿಯಿದ್ದ, ಉಪಯೋಗಿಸದೆ ಎಂದೋ ಮರೆತು ಹೋಗಿದ್ದ ಪಲ್ಲಕ್ಕಿಯಲ್ಲಿ ಆಗಾಗ ಅಡಗಿಕೊಳ್ಳುತ್ತಿದ್ದೆ. ಹುಡುಕಾಡುವ ಕಣ್ಣುಗಳಿಂದ ಸುರಕ್ಷಿತವಾದ ಮತ್ತು ಎಲ್ಲರ ನೋಟಗಳಿಂದ ದೂರವಾದ ಈ ಸ್ಥಳ ನನಗೆ ಬಹಳ ಆನಂದವನ್ನು ನೀಡುತ್ತಿತ್ತು.



ಅಲ್ಲಿ ಕುಳಿತು ಬಹು ದೂರದ, ಅಪರಿಚಿತ ಸ್ಥಳಗಳ ಮೂಲಕ ನನ್ನ ಕಲ್ಪನಾ ಪಯಣದಲ್ಲಿ ಸಾಗುತ್ತಿದ್ದೆ. ನನ್ನ ಪಲ್ಲಕ್ಕಿಯು ಕೆಲವೊಮ್ಮೆ ನವಿಲಿನಾಕಾರದ ಹಡಗಾಗುತ್ತಿತ್ತು. ಅದರಲ್ಲಿ ಕುಳಿತ ನಾನು ಸಮುದ್ರತೀರವು ಮರೆಯಾಗುವವರೆಗೆ ತೇಲುತ್ತಾ ಸಾಗುತ್ತಿದ್ದೆ.












# ಹುಡುಗಾಟದ ದಿನಗಳು





– ಬ್ಯಾಟು ಮತ್ತು ಬಾಲುಗಳ ಜೊತೆ ಹಾಗೂ ಬುಗುರಿಗಳೊಡನೆ ಆಡುತ್ತಿರುವ ಹುಡುಗರು

ಎಷ್ಟೋ ದಿನ ನಾನು ಊಹಾಪೋಹದ ಮಕ್ಕಳನ್ನು ಕಲ್ಪಿಸಿಕೊಳ್ಳುತ್ತಾ ನನಗೆ ನಾನೇ ಶಿಕ್ಷಕನ ಪಾತ್ರ ನಿರ್ವಹಿಸುತ್ತಿದ್ದೆ. ಕೆಲ ಮಕ್ಕಳು ತುಂಬಾ ತುಂಟರಾಗಿದ್ದು, ತಮ್ಮ ಪುಸ್ತಕಗಳೆಡೆಗೆ ಗಮನವೇ ನೀಡುತ್ತಿರಲಿಲ್ಲ. ನಾನು ಜೋರಾಗಿ ಹೆದರಿಸುತ್ತಿದ್ದೆ. ಆದರೆ ಮಕ್ಕಳ ತುಂಟತನವನ್ನು ನಿಲ್ಲಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಅಲ್ಲಿಗೆ ನನ್ನ ಆಟ ಮುಗಿಯುತ್ತಿತ್ತು.

ನಮ್ಮ ಮನೆಯ ಉತ್ತರ ಭಾಗಕ್ಕೆ ತುಂಬಾ ದೂರದಲ್ಲಿ ಒಂದು ಹಳೆಯ ಉಗ್ರಾಣವಿತ್ತು. ಇಲ್ಲಿ ಹಿಂದೆ ಧಾನ್ಯಗಳನ್ನು ಸಂಗ್ರಹಿಸಿಡುತ್ತಿದ್ದರು. ಉಗ್ರಾಣವಿದ್ದ ಈ ಸ್ಥಳವು ನಿರ್ಜನವಾಗಿತ್ತು ಹಾಗೂ ಉಪಯೋಗಕ್ಕೆ ಬಾರದ ಸ್ಥಳವಾಗಿದ್ದು ನನಗೆ ಆಕರ್ಷಣೀಯ ಕೇಂದ್ರವಾಗಿತ್ತು. ಇಲ್ಲಿ ಸಮಯ ಕಳೆಯಲು ಇಷ್ಟಪಡುತ್ತಿದ್ದೆ. ಈ ಸ್ಥಳವು ಹುಡುಗಾಟದ ದಿನಗಳಲ್ಲಿ ನನ್ನ ಕಲ್ಪನೆಗೆ ಮುಕ್ತ ಅವಕಾಶ ನೀಡಿತು.

ಬೆಳಗಿನಿಂದ ಬಂದು ಹೋದ ವಿವಿಧ ಶಿಕ್ಷಕರು ಮತ್ತು ವಿದ್ವಾಂಸರಿಂದ ಗಣಿತ, ಸಾಹಿತ್ಯ, ಪರಿಸರ ವಿಜ್ಞಾನ ಮತ್ತು ಸಂಸ್ಕೃತ ವ್ಯಾಕರಣದ ಅಧ್ಯಯನಕ್ಕೆ ಒಳನೋಟವನ್ನು ಬಂಗಾಳಿ ಭಾಷೆಯಲ್ಲಿ ನೀಡುತ್ತಿದ್ದರು. ಅದನ್ನು ನಾನು ಅಭ್ಯಾಸ ಮಾಡುತ್ತಿದ್ದೆ. ನನ್ನ ಮನಸ್ಸು ಕೌಶಲ್ಯದಿಂದ ಕಲಿಕೆಯನ್ನು ಹೇರುವ ಬಲೆಯ ರಂಧ್ರಗಳ ಮೂಲಕ ತಪ್ಪಿಸಿಕೊಂಡು ಸುತ್ತಾಡುತ್ತಿತ್ತು.

ನನ್ನ ಅನೇಕ ಶಿಕ್ಷಕರಲ್ಲಿ ಒಬ್ಬರಾದ ಮಾಸ್ಟರ್ ನೀಲ್‌ಕಮಲ್ ನನ್ನ ಬುದ್ಧಿವಂತಿಕೆಯ ಕುರಿತು "ಅಭಿಪ್ರಾಯ"ವನ್ನು ವ್ಯಕ್ತಪಡಿಸಿದರು, ಅದನ್ನು ಇಲ್ಲಿ ಮುದ್ರಿಸಲು ಸಾಧ್ಯವಿಲ್ಲ!



ವೈದಕೀಯ ಕಾಲೇಜಿನ ವಿದ್ಯಾರ್ಥಿಯು ನನಗೆ ಅಸ್ಥಿಪಂಜರದ ಸಹಾಯದಿಂದ ಮೂಳೆಗಳ ಬಗ್ಗೆ ಕಲಿಸಿದರು! ಎಲುಬುಗಳು ಅಲುಗಾಡತೊಡಗಿದವು ಮತ್ತು ರಟರಟ ಶಬ್ದ ಮಾಡತೊಡಗಿದವು. ಆದರೆ ಅದನ್ನು ನಿರಂತರವಾಗಿ ನಿಭಾಯಿಸುವ ಮೂಲಕ ಉದ್ದವಾದ, ಕಷ್ಟಕರವಾದ ಹೆಸರುಗಳನ್ನು ಕಲಿಯುವುದರ ಮೂಲಕ ನನಗಾದ ಭಯದಿಂದ ಹೊರಬಂದೆ.



ಕೆಲಸಗಾರರವಸತಿಗೃಹದಿಂದರಾಮಾಯಣವನ್ನು ಆಲಿಸುವ ಹಾಗೂ ಸಾಯಂಕಾಲ ಅಜ್ಜಿ ಹೇಳುವ ಕಥೆಯನ್ನು ಕೇಳುವ ಮೂಲಕ ನನ್ನ ಪ್ರಾರಂಭಿಕ ಕಲಿಕೆ ಆಯಿತು.

ಕವಿತೆ ಮತ್ತು ಕಥೆಯನ್ನು ಓದುವುದು ಹಾಗೂ ಆಲಿಸುವುದರಿಂದ ನನ್ನಲ್ಲಿ ಸತ್ಯದ ಅರಿವಿನ ಪ್ರಜ್ಞೆ ಮತ್ತು ಸಾಮರಸ್ಯದ ಅಸ್ತಿತ್ವ ಜಾಗೃತವಾಯಿತು. ಇದು ನನ್ನನ್ನು ಆಜ್ಞಾನದಿಂದ ಸುತ್ತಮುತ್ತಲಿನ ಎಲ್ಲಾ ಕುತೂಹಲಗಳ ಬಗ್ಗೆ ಪ್ರಜ್ಞೆ ಮೂಡಿಸಲು ಕಾರಣವಾಯಿತು.



ಇಂಗ್ಲಿಷ್ ಕಲಿಕೆಯ ನಂತರ, ನನ್ನ ಸಾಯಂಕಾಲದ ಸಮಯವನ್ನು ಜಿಮ್ನಾಸ್ಟಿಕ್ ಮತ್ತು ಚಿತ್ರಕಲೆ ಅಭ್ಯಾಸಕ್ಕಾಗಿ ಉಪಯೋಗಿಸುತ್ತಿದ್ದೆ. ಕಣ್ಣುರೆಪ್ಪೆ ಮುಚ್ಚಿ ಹಾಸಿಗೆ ತಲುಪುವವರೆಗೆ ಕಲಿಕೆ ಮುಂದುವರಿಯುತ್ತಿತ್ತು. ನಾನು ರಾಜಕುಮಾರನ ಮುಗಿಯದ ಸಾಹಸಯಾತ್ರೆಯ ಕಥೆ ಕೇಳುತ್ತಾ ನಿದ್ರೆಗೆ ಜಾರುತ್ತಿದ್ದೆ.

# ತಂದೆಯೊಂದಿಗೆ ಪಯಣ

ತಂದೆಯವರು ಕೆಲಸದ ನಿಮಿತ್ತ ಪ್ರಯಾಣ ಮಾಡುತ್ತಿದ್ದುದರಿಂದ ನನಗೆ ಅವರೊಡನೆ ಮಾತುಕತೆಗೆ ಅವಕಾಶ ಕಡಿಮೆಯಿತ್ತು. ಆದರೆ ಅವರ ಇರುವಿಕೆಯನ್ನು ಅನುಭವಿಸುತ್ತಿದ್ದೆ. ಏಕೆಂದರೆ ಅವರು ಪ್ರವಾಸದಲ್ಲಿದ್ದರೂ ಯಾವಾಗಲೂ ಮನೆಯ ವ್ಯವಸ್ಥೆಯನ್ನು ಕರಾರುವಕ್ಕಾಗಿ ನಿರ್ವಹಿಸುತ್ತಿದ್ದರು.

ನನ್ನ ಉಪನಯನ ಕಾರ್ಯದ ನಂತರ ತೀರ್ಥರೂಪರೊಂದಿಗೆ ಹಿಮಾಲಯಕ್ಕೆ ದೀರ್ಘ ಪ್ರವಾಸಕ್ಕೆ ಬರಲು ಆಹ್ವಾನಿಸಿದರು. ಅವರು ಮೊತ್ತ ಮೊದಲು ಪ್ರವಾಸಕ್ಕೆ ಬರುತ್ತೀಯಾ ಎಂದು ನನ್ನಲ್ಲಿ ಕೇಳಿದರು. ಆಗಲೇ ನನಗೆ ಅರ್ಥವಾಗಿದ್ದು, ನನ್ನ ತಂದೆ ಹನ್ನೊಂದು ವರ್ಷದ ಮಗುವಿನ ಅಭಿಪ್ರಾಯ ಮತ್ತು ಆಯ್ಕೆಗೂ ಗೌರವ ನೀಡುತ್ತಿದ್ದರು.

ಆತ್ಮಾವಲೋಕನ ಮಾಡಿಕೊಂಡಾಗ ಈ ಪ್ರವಾಸವು ನನಗೆ ಕಲಿಕೆಯ ಮೈಲಿಗಲ್ಲಾಗಿದ್ದು ಮಾತ್ರವಲ್ಲದೆ, ನನ್ನ ಯುವ ಜೀವನಕ್ಕೆ ಮಹತ್ವದ ತಿರುವು ನೀಡಿತು. ಇದು ಭವಿಷ್ಯದ ಮುನ್ನುಡಿಯಾಯಿತಲ್ಲದೆ, ಅನ್ವೇಷಣೆಯ ಸ್ವಾತಂತ್ರ್ಯ ಮತ್ತು ಯುವ ಭಾವನೆಗಳನ್ನು ಅನುಭವಿಸಲು ವೇದಿಕೆಯಾಯಿತು.











ನಾನು ರೈಲಿನಲ್ಲಿ ಪ್ರಯಾಣಿಸುವಾಗ ಹಳ್ಳಿಗಳಲ್ಲಿ ಒಂದರ ನಂತರ ಒಂದು ಕೃಷಿ ಭೂಮಿಯನ್ನು ನೋಡಿದೆ. ಅವುಗಳೆಲ್ಲವೂ ನೀಲಿ ಹಸಿರು ಮರಗಳಿಂದ ಸುತ್ತುವರಿದಿದ್ದು, ಈ ದೃಶ್ಯ ಮರಿಗಳಿಗೆ ಗೂಡು ನೆರಳು ನೀಡುವಂತೆ ಮತ್ತು ಚಿತ್ರಧಾರೆಗಳು ತೇಲಾಡುವಂತೆ ಭಾಸವಾಗುತ್ತಿತ್ತು.

**ನಮ್ಮ ಮೊದಲ ನಿಲುಗಡೆ ಭೋಲ್‌ಪುರ್.....**

ನಾನು ಚಿಕ್ಕವನಾಗಿದ್ದರೂ, ತಂದೆಯವರು ನನ್ನ ತಿರುಗಾಟಗಳಿಗೆ ಯಾವುದೇ ಅಡ್ಡಿಪಡಿಸುತ್ತಿರಲಿಲ್ಲ. ನಾನು ಮರಳು ಮಣ್ಣಿನಲ್ಲಿ ತಿರುಗಾಡಿದೆ. ಆ ಮರಳು ಮಳೆಯಿಂದಾಗಿ ನೇಗಿಲಿನಿಂದ ಉಳುಮೆ ಮಾಡಿದ ಸಾಲುಗಳಂತೆ ಕಾಣುತ್ತಿತ್ತು. ಸಮಗ್ರ ದೃಶ್ಯವು ವರ್ಣರಂಜಿತ ಪರ್ವತದಂತೆ ಕಾಣುತ್ತಿದ್ದು, ಪೂರ್ಣವಾಗಿ ಕೆಂಪು ಜಲ್ಲಿಕಲ್ಲು ಮತ್ತು ಸ್ಪಟಿಕದ ಶಿಲೆಗಳಿಂದ ಕೂಡಿತ್ತು. ನಾನು ವಿವಿಧ ರೀತಿಯ ಕಲ್ಲುಗಳನ್ನು ಸಂಗ್ರಹಿಸಿದೆ ಮತ್ತು ಅದನ್ನು ನನ್ನ ಭಾವನೆಗಳಿಗೆ ಸ್ಪಂದಿಸುವ ಪ್ರೀತಿಯ ತಂದೆಗೆ ತಂದುಕೊಟ್ಟೆ.








ನಾವು ಡಾಲಹೌಸಿಗೆ ಹೋದಾಗ, ಅಲ್ಲಿ ನಾನು ವಸಂತ ಋತುವಿನಲ್ಲಿ ಅರಳುವ ಹೂಗಳ ಸೌಂದರ್ಯದಿಂದ ಬೆಳಗಿರುವ ಪರ್ವತವನ್ನು ನೋಡಿದೆ.

ನಾವು ಬಕ್‌ರೋಟನಲ್ಲಿ ತೆಗೆದುಕೊಂಡಿದ್ದ ಮನೆ ಎತ್ತರದ ಬೆಟ್ಟದ ಮೇಲಿತ್ತು. ಆಗ ಮೇ ತಿಂಗಳು ಸಮೀಪಿಸಿದ್ದರೂ, ಇನ್ನೂ ತೀಕ್ಷ್ಣವಾದ ಚಳಿಯಿಂದ ಕೂಡಿತ್ತು. ಇದರಿಂದಾಗಿ ಪರ್ವತದ ನೆರಳಿನ ಪ್ರದೇಶದಲ್ಲಿ ಚಳಿಗಾಲದ ಹಿಮ ಇನ್ನೂ ಕರಗಿರಲಿಲ್ಲ. ನನ್ನ ಕೊಠಡಿಯು ಮನೆಯ ಒಂದು ತುದಿಯಲ್ಲಿತ್ತು. ಇದರಿಂದ ನಾನು ಹಾಸಿಗೆಯ ಮೇಲೆ ಮಲಗಿಕೊಂಡು, ದೂರದ ಹಿಮಾಚ್ಛಾದಿತ ಶಿಖರಗಳು ನಕ್ಷತ್ರದ ಮಂದ ಬೆಳಕಿನಲ್ಲಿ ಮಿನುಗುವುದನ್ನು ಕಿಟಿಕಿಯಿಂದ ಕಾಣಲು ಸಾಧ್ಯವಾಯಿತು.



ಸೂರ್ಯೋದಯಕ್ಕೆ ಮೊದಲು, ನನ್ನ ತಂದೆ ಬೆಳಗಿನ ಪ್ರಾರ್ಥನೆಯನ್ನು ಹೇಳುತ್ತಿದ್ದರು. ನಂತರ ನಾವು ಮುಂಜಾನೆ ನಡಿಗೆಗೆ ಹೊರಗೆ ಹೋಗುತ್ತಿದ್ದೆವು. ನಾನು ಅವರೊಂದಿಗೆ ಸರಿಸಮನಾಗಿ ಹೆಜ್ಜೆಹಾಕಲು ಕಷ್ಟಪಡುತ್ತಿದ್ದೆ ಮತ್ತು ಸ್ವಲ್ಪ ಸಮಯದ ನಂತರ ನನ್ನ ಪ್ರಯತ್ನ ಬಿಟ್ಟು ಬಿಡುತ್ತಿದ್ದೆ. ಮತ್ತೆ ಪುನಃ ಬೇಗ ಬೇಗ ನಡೆಯುತ್ತಿದ್ದೆ. ಬೆಳಗ್ಗಿನ ಪಾಠ ಮತ್ತು ಮಧ್ಯಾಹ್ನದ ಊಟದ ನಂತರ, ನಾನು ಪರ್ವತದೆಡೆಗೆ ಅನ್ವೇಷಣೆಗಾಗಿ ಸುತ್ತಾಡಿಕೊಂಡು ಬರಲು ಹೋಗುತ್ತಿದ್ದೆ. ಮುಸ್ಸಂಜೆಯಲ್ಲಿ ನಾವು ಬಂಗಲೆಯ ಹೊರಗೆ ಕುಳಿತುಕೊಳ್ಳುತ್ತಿದ್ದೆವು. ಆಗ ಸ್ಪಷ್ಟವಾದ ಆಗಸದಲ್ಲಿ ತಾರೆಗಳು ಪ್ರಕಾಶಮಾನವಾಗಿ ಮಿನುಗುತಿದ್ದವು. ನನ್ನ ತಂದೆ ನಕ್ಷತ್ರಪುಂಜಗಳನ್ನು ತೋರಿಸಿ, ಖಗೋಳಶಾಸ್ತ್ರದ ಬಗ್ಗೆ ವಿವರಣೆ ನೀಡುತ್ತಿದ್ದರು.

ನನ್ನ ತಂದೆ ನನ್ನ ಸ್ವಾತಂತ್ರ್ಯಕ್ಕೆ ಯಾವಾಗಲೂ ಅಡ್ಡಿಪಡಿಸುತ್ತಿರಲಿಲ್ಲ. ನಂಬಿಕೆ ಮತ್ತು ಪ್ರೀತಿ ಹೃದಯದಿಂದ ಬಂದಾಗಲೇ ಸತ್ಯದ ಅರಿವಾಗುತ್ತದೆ ಎಂದು ಅವರು ನಂಬಿದ್ದರು. ಅವರು ನನ್ನ ಇಚ್ಛೆಯಂತೆ ಪರ್ವತ ಸಾಲುಗಳಲ್ಲಿ ಸುತ್ತಾಡಲು ಅವಕಾಶ ನೀಡುತ್ತಿದ್ದರಲ್ಲದೆ, ಮುಕ್ತವಾಗಿ ಸತ್ಯ ಶೋಧನೆಗೆ ನನ್ನದೇ ದಾರಿಯನ್ನು ಆಯ್ಕೆಮಾಡಲು ಬಿಟ್ಟಿದ್ದರು. ನಾನು ಮಾಡುವ ತಪ್ಪುಗಳಿಂದ ಆಗುವ ಅಪಾಯಗಳಿಗೆ ತಡೆಯೊಡ್ಡುತ್ತಿರಲಿಲ್ಲ ಅಥವಾ ಎದುರಿಸಬಹುದಾದ ದುಃಖದ ಕುರಿತು ಎಚ್ಚರಿಕೆ ನೀಡುತ್ತಿರಲಿಲ್ಲ. ನನ್ನನ್ನು ಗುಣಮಟ್ಟದ ವ್ಯಕ್ತಿಯಾಗುವಂತೆ ಬೆಳೆಸಿದರೆ ಹೊರತು, ಕಟ್ಟುನಿಟ್ಟಿನ ಶಿಸ್ತಿನಿಂದಲ್ಲ.





## ನನ್ನ ಅಮ್ಮ



ಅಮ್ಮನ ನೆನೆಯಲಾರೆ ನಾ
ಆದರೆ....
ವಸಂತದುಷೆಯ ತಂಗಾಳಿಯಲಿ
ಬೆರೆತಿಹ ಹೂಗಳ ಕಂಪು
ಮಂದಿರದಿಂದ ಅನುದಿನ ನಸುಕಲಿ
ಪಸರುವ ಗಂಧದ ಕಂಪು
ಅಮ್ಮನ ಮಡಿಲಿನ ಪರಿಮಳದಂತೆಯೇ
ನನ್ನನು ತೀಡುವವು.

ಅಮ್ಮನ ನೆನೆಯಲಾರೆ ನಾ
ಆದರೆ....
ಆಟದ ನಡುವೆ ಆಗಾಗ
ಮರದಡಿ ಕುಳಿತು ವಿರಮಿಸುವಾಗ
ಆಟಿಕೆಗಳ ಮೇಲಿಂದ ರಾಗವೊಂದು
ತೇಲಿ ಬಂದಂತೆನಿಸುವುದು
ಅವಳು ತೊಟ್ಟಿಲು ತೂಗುವಾಗ
ಹಾಡುತ್ತಿದ್ದ ಜೋಗುಳದಂತೆಯೇ
ನನ್ನೊಳು ಅನುರಣಿಸುವುದು.

ಅಮ್ಮನ ನೆನೆಯಲಾರೆ ನಾ
ಆದರೆ...
ಕಂಗಳು ಕೋಣೆಯ ಕಿಟಕಿಯ ದಾಟಿ
ನೀಲಾಕಾಶದಿ ನಿಶ್ಚಲವಾದಾಗ
ಅಮ್ಮನ ಒಲುಮೆಯ ನೋಟವೇ
ಗಗನದ ತುಂಬಾ ಹರಡಿರುವಂತೆ
ಮನಭ್ರಮಿಸುವುದು.





ನನ್ನ ಹದಿನಾಲ್ಕನೇ ವಯಸ್ಸಿನಲ್ಲೇ ತಾಯಿ ಮರಣ ಹೊಂದಿದರು. ಅವರು ದೀರ್ಘಕಾಲದ ಖಾಯಿಲೆಯಿಂದ ನರಳುತ್ತಿದ್ದರು ಹಾಗೂ ಅವರ ರೋಗ ಉಲ್ಬಣಿಸಿ ಮಾರಣಾಂತಿಕ ಹಂತಕ್ಕೆ ತಲುಪಿದ್ದುದು ನಮಗೆ ತಿಳಿದಿರಲಿಲ್ಲ.

ಅವರು ಸಾವನ್ನಪ್ಪಿದ್ದ ರಾತ್ರಿ ಕೆಳ ಮಹಡಿಯ ಕೋಣೆಯಲ್ಲಿ ನಿದ್ದೆ ಮಾಡಿದ್ದೆವು. ಅಲ್ಲಿಗೆ ನರ್ಸ್ ಅಳುತ್ತಾ ಓಡಿ ಬಂದಳು. ಅವಳ ಮಾತಿನಿಂದ ಅರ್ಧ ಎಚ್ಚರಗೊಂಡು, ಅಲ್ಲಿ ಏನಾಯಿತು ಎಂದು ತಿಳಿಯದೆ ಹೃದಯ ತಳಮಳಗೊಂಡಿತು. ಆದರೆ ಆ ಘಟನೆಯಿಂದ ನನಗೆ ಏನು ಮಾಡಬೇಕೆಂದು ತೋಚಲಿಲ್ಲ. ನನಗೆ ಆ ಸಮಯದಲ್ಲಿ ಏನಾಯಿತು ಎಂದು ಅರಿವಿಗೇ ಬರಲಿಲ್ಲ.

## ನನ್ನ ಕವಿತೆ

ಶಾಲೆಗೆ ತಪ್ಪಿಸಿಕೊಂಡು, ಪರೀಕ್ಷೆಗಳಿಗೆ ಹಾಜರಾಗದೆ ಇರುತ್ತಿದ್ದೆ, ಆದರೆ ನನ್ನ ನಿಲುವು ಏನೆಂದು ನನಗೆ ಖಚಿತವಾಗಿ ತಿಳಿದಿರಲಿಲ್ಲ. ನನ್ನ ಮನಸ್ಸು ಎಲ್ಲೆಲ್ಲೋ ಅಲೆದಾಡುತ್ತಿತ್ತು. ಸಾಮಾನ್ಯ ಪುರುಷರು ಹಾಗೂ ಮಹಿಳೆಯರಿಂದ ಪದ್ಯಗಳು, ಶ್ಲೋಕಗಳು ಮತ್ತು ಪ್ರಾಸಬದ್ಧ ಕವನಗಳು ರಚಿತವಾಗಿವೆ ಎಂದು ಶೋಧಿಸಿದೆ. ಇದರ ಹುಮ್ಮಸ್ಸಿನಿಂದ ನಾನು ಕವಿತೆಯನ್ನು ಬರೆಯಲು ಪ್ರಾರಂಭಿಸಿದೆ.

ನನ್ನ ಆರಂಭಿಕ ಪ್ರಾಸಬದ್ಧ ಕವನಗಳು ಅಪಕ್ವವಾದ ಮನಸ್ಸಿನಿಂದ ರಚಿತವಾದದ್ದು ಮತ್ತು ರಾವುತನ ಆಲೋಚನೆಯಂತಿದ್ದವು.

ನಾನು ನನ್ನ ಕವಿತೆಯ ಅಭಿವೃದ್ಧಿಗೆ ಹಿರಿಯ ಸೋದರ ಸಂಬಂಧಿ ಜ್ಯೋತಿಗೆ ಋಣಿ. ಅವರು ನನಗೆ ಬರವಣಿಗೆಗೆ ಉತ್ತೇಜನ ನೀಡಿದ್ದಲ್ಲದೆ, ಕಾವ್ಯದ ಛಂದಸ್ಸಿನ ಪ್ರಕಾರವನ್ನು ನನಗೆ ಕಲಿಸಿದರು. ಹಿರಿಯ ಸಹೋದರ ಸೋಮೇಂದ್ರನಾಥ್ ನನ್ನ ಸಾಧನೆಯ ಬಗ್ಗೆ ಹೆಮ್ಮೆಪಟ್ಟು  ಪ್ರೇಕ್ಷಕರ ಸಮೂಹವನ್ನು ಆಕರ್ಷಿಸಲು ಉತ್ತೇಜನಗೊಂಡರು. ನಾನು ಬರೆದ  ಜಗತ್ತಿನ ವಿವಿಧ ಪ್ರಕಾರಗಳನ್ನೊಳಗೊಂಡ ಧರ್ಮಗೀತೆಯನ್ನು ಕೇಳಿದ ನಂತರ, ಪ್ರಪಂಚದ ದು:ಖಗಳ ಅರಿವು ನನ್ನ ಸಣ್ಣ ಮಗನಿಗೆ ಎಳವೆಯಲ್ಲಿಯೇ ಆಗಿದೆ ಎಂದು ತಂದೆ ಸಂತೋಷಪಟ್ಟರು. ನನ್ನ ಸಾಧನೆಗೆ ಪ್ರತಿಫಲವಾಗಿ ಬಹುಮಾನದ ರೂಪದಲ್ಲಿ ಚೆಕ್ ನೀಡಿದರು.





1878 ರಿಂದ 1880ರ ಮಧ್ಯೆ ಇಂಗ್ಲೆಂಡ್‌ನಲ್ಲಿ ನಾನು ಕವಿತೆಗಳನ್ನು ಬರೆಯಲು ಆರಂಭಿಸಿದೆನು. ಅಲ್ಲಿಂದ ಮನೆಗೆ ಪ್ರಯಾಣ ಮಾಡಿದ ಸಂದರ್ಭದಲ್ಲೂ ಇದು ಮುಂದುವರಿಯಿತು. ಮನೆಗೆ ಬಂದ ನಂತರ ಅದು ಪೂರ್ಣವಾಯಿತು. ಈ ಕವನ ಸಂಕಲನಕ್ಕೆ "ಭಗ್ನ ಹೃದಯ" ಅಥವಾ "ಒಡೆದ ಹೃದಯ" ಎಂದು ಶೀರ್ಷಿಕೆ ನೀಡಿದೆನು.

ನನಗೆ ಹದಿನೆಂಟು ವರ್ಷ – ಅತ್ತ ಬಾಲ್ಯವೂ ಅಲ್ಲ ಇತ್ತ ಯೌವನವೂ ಅಲ್ಲ. ಈ ವಯಸ್ಸಿನಲ್ಲಿ ಸತ್ಯದ ನೇರ ಕಿರಣಗಳು ನನ್ನಲ್ಲಿ ಪ್ರಕಾಶಿಸುತ್ತಿರಲಿಲ್ಲ. ಅದರ ಪ್ರತಿಫಲನ ಅಲ್ಲಿ ಇಲ್ಲಿ ಕಾಣುತ್ತಿತ್ತು. ಉಳಿದವೆಲ್ಲವೂ ನೆರಳು. ಅದು ಸಂಜೆಯ ಬೆಳಕಿನಲ್ಲಿ ಉಂಟಾಗುವ ಛಾಯೆಯಂತೆ ಅದರ ಕಲ್ಪನೆಯು ಅಸ್ಪಷ್ಟ ಮತ್ತು ದೀರ್ಘವಾದ ಚಿತ್ರಣವಾಗಿತ್ತಲ್ಲದೆ, ನೈಜ ಜಗತ್ತು ಅದ್ಭುತವಾಗಿ ಗೋಚರಿಸುತ್ತಿತ್ತು.

ನಾನು ಒಂದು ದಿನ ಮುಂಜಾನೆ ಕಲ್ಕತ್ತಾದ ಫ್ರೀ ಸ್ಕೂಲ್ ಲೇನ್‌ನಿಂದ ಸೂರ್ಯೋದಯವನ್ನು ವೀಕ್ಷಿಸುತ್ತಿದ್ದೆ. ಆಗ ನನಗೆ ಇದ್ದಕ್ಕಿದ್ದಂತೆ ಕತ್ತಲು ಸರಿದು ಎಲ್ಲವೂ ಪ್ರಕಾಶಮಾನವಾಗಿ ಗೋಚರಿಸಿತು. ಸಮಗ್ರ ದೃಶ್ಯವು ಅದ್ಭುತವಾದ ಲಯಗಳಿಂದ ಕೂಡಿದ ಪರಿಪೂರ್ಣ ಸಂಗೀತದಂತೆ ಭಾಸವಾಗುತ್ತಿತ್ತು.

ತುಂಬಾ ದಿನಗಳ ಪದ್ಯ ನಿರ್ಝರೇರ್ ಸ್ವಪ್ನಭಂಗ ಅಥವಾ ಜಲಪಾತದ ಭೋರ್ಗರೆತ ಭಾವಪೂರ್ಣವಾಗಿತ್ತು ಮತ್ತು ವಾಸ್ತವವಾಗಿ ಸರಣಿಕ್ರಮದಲ್ಲಿ ಅಭ್ಯಾಸಮಾಡುವ ರೀತಿಯಲ್ಲಿತ್ತು. ಜೀವನದ ಪರಿಪೂರ್ಣವಾದ ಸೌಂದರ್ಯವನ್ನು ವ್ಯಕ್ತಪಡಿಸುವುದು ನನ್ನ ಗುರಿಯಾಗಿತ್ತು. ಅದು ಕತ್ತಲು ಸರಿದಾಗ ಮಾತ್ರ ಸಾಧ್ಯ ಎಂದು ನಾನು ಅರಿತುಕೊಂಡೆ.






ಈ ಬೆಳಗಿನ ಸೊಬಗಿನೊಳು ಹೇಗೋ
ರವಿಯ ಕಿರಣವು ಅಂತರಂಗವ ಸ್ಪರ್ಶಿಸಿದೆ
ಉಷಾಕಾಲದ ಖಗಗಳ ಕಲರವ ಹೇಗೋ
ಗವಿಯೊಳು ಕವಿದಿಹ ನೀರವತೆಯ ಅಳಿಸಿದೆ.

ಕಾರಣ ಹೊಳೆಯುತಿಲ್ಲ, ಏಕೋ
ಅಂತರಾತ್ಮವಿಂದು ಎಚ್ಚರಗೊಂಡಿದೆ
ಓ! ಜೀವಸಾಗರದ ಉಬ್ಬರವೇರುತಿದೆ
ಓ! ಹೃದಯದಿಂಗಿತವೇನೋ ತಿಳಿಯದಾಗಿದೆ.

ಇಳೆಯಿದು ನಲುಗಿದೆ, ನಡುಗಿದೆ
ಸಡಿಲಗೊಂಡ ಬಂಡೆಗಳೆಷ್ಟೋ ಕೆಳಗುರುಳಿವೆ
ನೊರೆ ನೊರೆ ಸಾಗರವದು ಉಕ್ಕಿದೆ, ಆರ್ಭಟಿಸಿದೆ
ಆವೇಶದಿ, ಆಕ್ರೋಶದಿ ಭೋರ್ಗರೆದಿದೆ.

# ಗ್ರಾಮೀಣ ಬಂಗಾಳಕ್ಕೆ ನನ್ನ ಅನಿರೀಕ್ಷಿತ ಭೇಟಿ

ನನಗೆ ಸುಮಾರು 29 ವರ್ಷವಿದ್ದಾಗ ನನ್ನ ತಂದೆ ಪದ್ಮ ನದಿ ತೀರದಲ್ಲಿ ಶಿಲೈದಾಹದಿಂದ ಪಟೀಸರದವರೆಗೆ ಇರುವ ನಮ್ಮ ಎಸ್ಟೇಟ್ ಜವಾಬ್ದಾರಿ ತೆಗೆದುಕೊಳ್ಳಲು ಕೇಳಿದರು. ನಾನು ಜವಾಬ್ದಾರಿಯನ್ನು ತೆಗೆದುಕೊಂಡ ಎಸ್ಟೇಟ್ ಸುತ್ತ ಮುತ್ತ ನನ್ನ ಜೀವನವು ನಿಧಾನಗತಿಯಲ್ಲಿ ಸಾಗುತ್ತಿತ್ತು. ಸಂತೋಷ ಹಾಗೂ ದುಃಖಗಳು ಸಾಮಾನ್ಯವಾಗಿದ್ದು, ಮೂಲರೂಪದ ಬಣ್ಣದಂತೆ ಮತ್ತು ಬೆಳಕಿನಂತೆ ಕಾಣುತ್ತಿತ್ತು.

ನಾನು ಶಿಲೈದಾಹದಲ್ಲಿರುವಾಗ ಗ್ರಾಮ ಜೀವನದ ಎಲ್ಲಾ ಅಂಶಗಳನ್ನು ನೋಡುತ್ತಾ ನನ್ನ ಜೀವನವನ್ನು ಪ್ರಾರಂಭಿಸಿದೆ. ನಿಧಾನವಾಗಿ ಆದರೆ ಖಂಡಿತವಾಗಿಯೂ ಹಳ್ಳಿಯ ಜನರ ಬಡತನ ಮತ್ತು ದುಃಖವನ್ನು ಅರ್ಥ ಮಾಡಿಕೊಳ್ಳಲು ಪ್ರಾರಂಭಿಸಿದೆ ಮತ್ತು ಅದಕ್ಕಾಗಿ ಏನಾದರೂ ಮಾಡಬೇಕೆಂದು ಅವಿಶ್ರಾಂತವಾಗಿ ಚಿಂತನೆ ಮಾಡಿದೆ. ನಾನು ಏನು ಮಾಡಬಹುದು ಎಂದು ಯೋಚಿಸತೊಡಗಿದೆ. ನಾನು ಹೊರಗಿನಿಂದ ಮಾಡುವ ನೆರವು ಅಷ್ಟೇನೂ ಸಹಾಯವಾಗುವುದಿಲ್ಲ ಎಂದೂ ಆಲೋಚಿಸಿದೆ. ನಾನು ಅವರ ಮನಸ್ಸನ್ನು ಸ್ವಾವಲಂಬನೆಯ ಕಡೆಗೆ ಸೆಳೆಯುವ ಪ್ರಯತ್ನವನ್ನು ಪ್ರಾರಂಭಿಸಿದೆ.

"ನಮ್ಮ ಗ್ರಾಮದ ಸಮುದಾಯದಲ್ಲಿರುವ ಸಮಸ್ಯೆಗಳು ನನ್ನ ತಲೆಗೆ ತುಂಬಿಕೊಂಡಿದ್ದವು ಅದಕ್ಕಾಗಿ ನಮ್ಮ ಜಮೀನಿನಲ್ಲಿ ಗ್ರಾಮ ಪುನರ್‌ನಿರ್ಮಾಣದ ಕಾರ್ಯವಾಗಬೇಕು. ಹಾಗಾಗಿ ಕೆಲವು ಹುಡುಗರು ಸ್ವಯಂಪ್ರೇರಿತರಾಗಿ ಹಳ್ಳಿಯ ಜನರನ್ನು ಅವರ ಶಿಕ್ಷಣ, ನೈರ್ಮಲ್ಯ ಮತ್ತು ಸ್ವಯಂ ಆಡಳಿತ ಸಂಘಟನೆಗೆ ಪ್ರೇರೇಪಿಸಲು ಪ್ರಯತ್ನಿಸಿದರು. ಈ ಹುಡುಗರು ಸಾರ್ವಜನಿಕ ಕೆಲಸಗಳಾದ ರಸ್ತೆ ದುರಸ್ಥಿ, ಚರಂಡಿ ನಿರ್ಮಾಣ ಮತ್ತು ಗಿಡಗಂಟಿಗಳನ್ನು ಸ್ವಚ್ಛಗೊಳಿಸುವ ಕಾರ್ಯಗಳಿಗೆ ಈಗಾಗಲೆ ಚಾಲನೆ ನೀಡಿದ್ದರು". ಎಂಬುದಾಗಿ ಆ ಸಮಯದಲ್ಲಿ ನನ್ನ ಆತ್ಮೀಯ ಸ್ನೇಹಿತರಾದ ಜಗದೀಶ್ ಚಂದ್ರ ಬೋಸ್‌ರ ಪತ್ನಿ ಅಬಲಾ ಬೋಸ್‌ರಿಗೆ ನಾನು ಬರೆದು ಕಳುಹಿಸಿದೆನು.





# ಮನುಷ್ಯನ ಧರ್ಮ

ಶಿಲೈದಾಹ ಮತ್ತು ಪಟೀಸರ ಗ್ರಾಮದಲ್ಲಿ ವಾಸಿಸುವಾಗ, ನನಗೆ ಮೊಟ್ಟ ಮೊದಲು ಗ್ರಾಮೀಣ ಜೀವನದ ನೇರ ಸಂಪರ್ಕವಾಯಿತು. ಹರಿಯುವ ನದಿಗಳು, ಹುಲ್ಲುಗಾವಲುಗಳು, ಭತ್ತದ ಗದ್ದೆಗಳು ಮತ್ತು ಮಣ್ಣಿನ ಗುಡಿಸಲುಗಳಿಗೆ ಆಶ್ರಯ ನೀಡಿದ ಮರಗಳ ದೃಶ್ಯವು ಒಂದೆಡೆ ಕಾಣುತ್ತಿತ್ತು. ಇನ್ನೊಂದೆಡೆ ಜನರ ನಿಜ ಜೀವನದ ಕಥೆ ಬಿಂಬಿತವಾಗುತ್ತಿತ್ತು. ನಾನು ಕರ್ತವ್ಯಗಳನ್ನು ನಿರ್ವಹಿಸುವಾಗ ಅವರ ಕಷ್ಟಗಳನ್ನು ಅರ್ಥ ಮಾಡಿಕೊಂಡೆನು. ಎಸ್ಟೇಟ್‌ನ ಲೆಕ್ಕ ಪತ್ರ ಇಡುವುದು, ಆದಾಯ ಸಂಗ್ರಹಣೆ, ಆಯ ಮತ್ತು ವ್ಯಯಗಳ ವಿವರಗಳ ಬಗ್ಗೆ ಕಡೆಗಣಿಸಿದ್ದರಿಂದ, ಅದು ನನ್ನ ಮನಸ್ಸಿಗೆ ಭಾರಿ ಹೊಡೆತವನ್ನು ನೀಡಿತು.

ನಾನು ಎಸ್ಟೇಟ್‌ನ ಕೆಲಸವನ್ನು ಮಾಡಲು ಪ್ರಾರಂಭಿಸಿದೆ, ಅದರಲ್ಲಿ ನನ್ನನ್ನು ನಾನು ತೊಡಗಿಸಿಕೊಂಡೆ. ನಾನು ಯಾವುದೇ ಜವಾಬ್ದಾರಿಯನ್ನು ಕೈಗೆತ್ತಿಕೊಂಡಾಗ ನಾನು ನನ್ನನ್ನು ಅದರಲ್ಲಿ ತೊಡಗಿಸಿಕೊಳ್ಳುತ್ತಿದ್ದೆ ಹಾಗೂ ಕಟ್ಟಕಡೆಯವರೆಗೂ ಪ್ರಯತ್ನ ಮಾಡುವುದು ನನ್ನ ಸ್ವಭಾವವಾಗಿತ್ತು. ಜಮೀನ್ದಾರಿ ಕೆಲಸದಲ್ಲಿನ ಸಂಕೀರ್ಣತೆಯ ಗೋಜಲು ಬಿಡಿಸಲು ನಾನು ಪ್ರಾರಂಭಿಸಿದ ಹೊಸ ವಿಧಾನಗಳು ನನ್ನನ್ನು ಹೆಸರುವಾಸಿಯಾಗುವಂತೆ ಮಾಡಿತು. ನೆರೆಹೊರೆಯ ಭೂಮಾಲಿಕರು ನನ್ನ ವಿಧಾನವನ್ನು ಕಲಿಯಲು ತಮ್ಮ ಕೆಲಸಗಾರರನ್ನು ಕಳುಹಿಸಲು ಪ್ರಾರಂಭಿಸಿದರು. ಹೊಸ ವಿಧಾನಗಳಲ್ಲಿ ದಾಖಲಾತಿಗಳನ್ನು ನಿರ್ವಹಿಸುವ ಬಗ್ಗೆ ಸಂಶಯಗಳಿದ್ದರೂ, ನಾನು ಮೇಲಿನಿಂದ ಕೆಳಗಿನವರೆಗೂ ಅದನ್ನು ಬದಲಾಯಿಸುವ ಕ್ರಮ ಮುಂದುವರಿಸಿದೆ. ಇದರ ಫಲಿತಾಂಶವು ತೃಪ್ತಿಕರ ಎಂದು ಸಾಬೀತಾಯಿತು.

ಕಡೆಗೆ ನನ್ನ ಧರ್ಮವನ್ನು ನಾನು ತಿಳಿದುಕೊಂಡೆನು
– ಅದುವೇ ಮಾನವ ಧರ್ಮ.
ಇದರಿಂದ ಅನಂತವಾಗಿರುವುದನ್ನು ಕೂಡ
ಮಾನವೀಯತೆಯಿಂದ ವಿವರಿಸಬಹುದು. ನನ್ನ ಪ್ರೀತಿ ಹಾಗೂ
ಸಹಕಾರ ಅಗತ್ಯವಾದ್ದರಿಂದ ಅದು ನನಗೆ ಹತ್ತಿರವಾಯಿತು.





ನಾನು ಬಾಲ್ಯ ಜೀವನದಿಂದ ಏಕಾಂತದಲ್ಲಿ ಇರುತ್ತಿದ್ದುದರಿಂದ ನಾನು
ಮಾಡುವ ಎಲ್ಲಾ ಕೆಲಸವನ್ನು ಉತ್ಸಾಹ ಮತ್ತು ಆನಂದದಿಂದ ಮಾಡಿದೆ.
ಇದು ಗ್ರಾಮದ ನನ್ನ ಮೊದಲ ಅನುಭವ.
ಹೊಸ ಆವಿಷ್ಕಾರಗಳು ದೀಪಗಳು ಪ್ರಜ್ವಲಿಸುವಂತೆ ನನಗೆ ಸಂತೋಷ
ಮತ್ತು ಕೆಲಸ ಮಾಡಲು ಉತ್ತೇಜನ ನೀಡಿದವು.

ಗ್ರಾಮಸ್ಥರಿಗೆ ಸಹಾಯ ಮಾಡಲು ಪ್ರಯತ್ನಿಸುವುದರಿಂದ ಏನೂ ಒಳ್ಳೆಯದಾಗುವುದಿಲ್ಲ. ಅವರ ಜೀವನದಲ್ಲಿ ಬೆಳಕಿನ ಕಿಡಿಯನ್ನು ಹಚ್ಚುವುದು ಹೇಗೆ ಎಂಬುವುದೇ ನನ್ನ ಸಮಸ್ಯೆಯಾಗಿತ್ತು.

ನಮ್ಮ ಅವಲಂಬನೆಯ ಅಭ್ಯಾಸ ಹಲವಾರು ವರ್ಷಗಳಿಂದ ಬಂದಿದೆ. ಹಿಂದಿನ ದಿನಗಳಲ್ಲಿ ಗ್ರಾಮದಲ್ಲಿ ಒಬ್ಬ ಶ್ರೀಮಂತ ವ್ಯಕ್ತಿಯಿರುತ್ತಿದ್ದರು. ಅವರೇ ಗ್ರಾಮದ ಆಧಾರಸ್ತಂಭ ಹಾಗೂ ಮಾರ್ಗದರ್ಶಿಯಾಗಿದ್ದರು. ಆರೋಗ್ಯ, ಶಿಕ್ಷಣ ಮತ್ತು ಪ್ರತಿಯೊಂದು ಅವರ ಜವಾಬ್ದಾರಿಯಾಗಿತ್ತು. ನಾನು ಆ ವ್ಯವಸ್ಥೆಯನ್ನು ಪ್ರಶಂಸಿಸಿದ್ದೆ. ಆದರೆ ಇದರಿಂದಾಗಿ ಸಾಮಾನ್ಯ ಮನುಷ್ಯನ ಸ್ವಾವಲಂಬನೆಯ ಸಾಮರ್ಥ್ಯ ಕುಂಠಿತವಾಗುವುದು ಸತ್ಯ.

ನನ್ನ ಎಸ್ಟೇಟ್‌ನಿಂದ ನದಿಯು ದೂರದಲ್ಲಿರುವುದರಿಂದ, ನೀರಿನ ಕೊರತೆಯು ಗಂಭೀರ ಸಮಸ್ಯೆಯಾಗಿತ್ತು. ನಾನು ಕಚೇರಿಯಿಂದ ಕುಷ್ಟಿಯಕ್ಕೆ ರಸ್ತೆ ನಿರ್ಮಾಣ ಮಾಡಿದೆ. ಗ್ರಾಮಸ್ಥರಿಗೆ ಕೆಲಸಗಾರರು ದುಡಿಮೆಯ ಫಲವನ್ನು ಅನುಭವಿಸುವುದನ್ನು ನೋಡಲು ಸಹಿಸಲಸಾಧ್ಯವಾಗುತ್ತಿತ್ತು ಎಂಬುದನ್ನು ಕಂಡುಹಿಡಿದೆ. ಅವರು ಹೆಚ್ಚಾಗಿ ನೀರಿಲ್ಲದ ಮತ್ತು ಕಳಪೆ ರಸ್ತೆಗಳ ಅನಾನುಕೂಲತೆಗಳ ಜೊತೆಗೆ ಜೀವನ ಸಾಗಿಸುತ್ತಾರೆ.





## ನನ್ನ ದೃಷ್ಟಿಕೋನಗಳು ಮತ್ತು ಗಮನಿಸಿದ ಅಂಶಗಳು

ವಾಸ್ತವವಾಗಿ ನನ್ನ ಶಾಲಾ ದಿನಗಳು ನನಗೆ ತೀವ್ರವಾದ ಹಿಂಸೆಯನ್ನುಂಟುಮಾಡಿದ್ದವು. ಏಕೆಂದರೆ ಶಾಲೆಯಲ್ಲಿ ಜಗತ್ತಿನ ಸಂಪೂರ್ಣವಾದ ವಿವರಗಳನ್ನು ನೀಡುತ್ತಿರಲಿಲ್ಲ. ಬಹಳ ದಿನ ನಾನು ಬಲವಂತವಾಗಿ ಶಾಲೆಗೆ ಹೋದೆ. ಅದು ನನಗೆ ಸಹಿಸಲಸಾಧ್ಯವಾದ ಹಿಂಸೆಯಾಯಿತು. ನಾನು ಸ್ವತಂತ್ರನಾಗುವ ಮೊದಲು ಬೆರಳೆಣಿಕೆಯಷ್ಟು ವರ್ಷ ಇದೇ ಹಿಂಸೆಯಿಂದ ಕಳೆದೆ. ಎಲ್ಲೆಡೆ ಶಿಕ್ಷಣ ವ್ಯವಸ್ಥೆಯಲ್ಲಿರುವ ಅಸಹಜ ಒತ್ತಡವನ್ನು ನನ್ನ ಮನಸ್ಸಿನಲ್ಲೇ ಅಳೆದೆ ಎಂದು ನಂತರ ಅರಿವಾಯಿತು.



"ರವೀಂದ್ರನಾಥರ ಜೊರಸಂಕೊದ ಅನುಭವಗಳು ಅವರಿಗೆ ಜೀವನದುದ್ದಕ್ಕೂ ಶಿಕ್ಷಣದಲ್ಲಿ ಸ್ವಾತಂತ್ರ್ಯದ ಪ್ರಾಮುಖ್ಯತೆಯ ಬಗ್ಗೆ ಮನವರಿಕೆಯುಂಟಾಗಲು ಸಹಾಯವಾದುವು. ಕಲೆಯ ಮಹತ್ವಕ್ಕಾಗಿ ಸೂಕ್ಷ್ಮತೆ ಮತ್ತು ಭಾವನೆಗಳನ್ನು ರೂಪಿಸುವುದು ಹಾಗೂ ವ್ಯಕ್ತಿಯ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಿಸರದೊಂದಿಗೆ ಇರುವ ನಿಕಟ ಸಂಬಂಧದ ಅವಶ್ಯಕತೆಯನ್ನು ಕೂಡಾ ಅವರು ಆಳವಾದ ರೀತಿಯಲ್ಲಿ ಮನಗಂಡಿದ್ದರು. ಕುಟುಂಬದ ವಿಶ್ವಮಾನವ ಚಟುವಟಿಕೆಗಳಲ್ಲಿ ಭಾಗವಹಿಸಿದ ಅವರು ಸಂಕುಚಿತ ಮನೋಭಾವನೆಯನ್ನು ತಿರಸ್ಕರಿಸತೊಡಗಿದರು ಮತ್ತು ಯಾವುದೇ ವಿಧದ ಸಂಕುಚಿತ ಮನೋಭಾವನೆಯು ಮನುಷ್ಯನನ್ನು ಮನುಷ್ಯನಿಂದ ಬೇರ್ಪಡಿಸುತ್ತದೆ ಎಂದು ನಿರ್ದಿಷ್ಟವಾಗಿ ತಿಳಿದುಕೊಂಡಿದ್ದರು. ತಮ್ಮ ನಿರ್ದಿಷ್ಟವಾದ ಸಂಸ್ಕೃತಿಯನ್ನು ಉಳಿಸಿಕೊಂಡು ಇತರ ಸಂಸ್ಕೃತಿಯ ಶ್ರೀಮಂತ ಅಂಶಗಳನ್ನು ಶ್ಲಾಘಿಸುವ ಸಾಧನವಾಗಿ ಶಿಕ್ಷಣವನ್ನು ಕಂಡುಕೊಂಡರು".

**– ಕೆ. ಎಮ್. ಓ" ಕಾನ್ನೆಲ್ (2003)**





Tagore at the Galerie Pigalle, Paris, 1930

ಮಾನವನ ಸ್ಫೂರ್ತಿಯನ್ನು ವಿಸ್ತರಣೆ ಮಾಡುವುದಕ್ಕಾಗಿ ಮಹತ್ವಾಕಾಂಕ್ಷೆ ಇರುವ ವಾತಾವರಣದಲ್ಲಿ ಬೆಳೆದೆ. ನಾವು ನಮ್ಮ ಭಾಷೆಯಲ್ಲಿ ಅಧಿಕಾರದ ಸ್ವಾತಂತ್ರ್ಯ, ನಮ್ಮ ಸಾಹಿತ್ಯದಲ್ಲಿ ಕಲ್ಪನೆಯ ಸ್ವಾತಂತ್ರ್ಯ, ನಮ್ಮ ಧಾರ್ಮಿಕ ಪಂಗಡಗಳಿಗೆ ಚಿಂತನೆಯ ಸ್ವಾತಂತ್ರ್ಯ ಮತ್ತು ಮನಸ್ಸಿಗೆ ಸಾಮಾಜಿಕ ಪರಿಸರ ಚಿಂತನೆಯ ಸ್ವಾತಂತ್ರ್ಯವನ್ನು ಬಯಸಿದೆವು. ಇಂತಹ ಅವಕಾಶಗಳು ನನ್ನಲ್ಲಿ ಶಿಕ್ಷಣದಲ್ಲಿರುವ ಶಕ್ತಿಯ ಬಗ್ಗೆ ಆತ್ಮವಿಶ್ವಾಸ ತುಂಬಿತು. ಇದು ಜೀವನದಲ್ಲಿ ನಿಜವಾದ ಸ್ವಾತಂತ್ರ್ಯವನ್ನು ನೀಡುತ್ತದೆ ಮತ್ತು ಮಾನವ ಜಗತ್ತಿನ ಧಾರ್ಮಿಕ ಸಮುದಾಯದ ನೈತಿಕ ಸ್ವಾತಂತ್ರ್ಯ ಪಡೆಯುವುದು ಮನುಷ್ಯನ ಅತ್ಯುನ್ನತ ಸಾಧನೆಯಾಗಿದೆ.

# ಶಾಂತಿನಿಕೇತನ ಮತ್ತು ನನ್ನ ಶಿಕ್ಷಣ ತತ್ವ

1901ರ ಡಿಸೆಂಬರ್‌ನಲ್ಲಿ ನಾನು ನನ್ನ ಕುಟುಂಬದವರೊಂದಿಗೆ ಶಾಂತಿನಿಕೇತನದ ನನ್ನ ತಂದೆಯ ಆಶ್ರಮಕ್ಕೆ ತೆರಳಿದೆನು. ಇದು ರಚನಾತ್ಮಕ ರಾಷ್ಟ್ರೀಯತೆಗೆ ನನ್ನ ಪ್ರತಿಕ್ರಿಯೆಯಾಗಿತ್ತು.

ಶಿಕ್ಷಣವನ್ನು ಕೈಗೆತ್ತಿಕೊಳ್ಳುವ ಮತ್ತು ಅದರ ಪ್ರಯತ್ನಕ್ಕಾಗಿ ಸಾಧ್ಯವಾದಷ್ಟು ದೇಶಿಯತೆ ಮೂಡಿಸುವ ಪ್ರಯತ್ನಕ್ಕಾಗಿ ಭೋಲಪುರದ ಬ್ರಹ್ಮಚರ್ಯ ಆಶ್ರಮದ ಶಾಲೆಯನ್ನು ಪ್ರಾರಂಭಿಸಲಾಯಿತು. ಅದೃಷ್ಟವಶಾತ್ ನನಗೆ ನನ್ನ ಕೆಲಸ ಪ್ರಾರಂಭಿಸಲು ಈಗಾಗಲೇ ಬೇಕಾದ ಸ್ಥಳ ನನ್ನ ಕೈಯಲ್ಲಿ ಇತ್ತು.

ನನ್ನ ತಂದೆಯು ಏಕಾಂತವಾದ ಸ್ಥಳವನ್ನು ಮೊದಲೇ ಆಯ್ಕೆ ಮಾಡಿಟ್ಟಿದ್ದರು. ಅದು ಜೀವನದಲ್ಲಿ ದೇವರ ಪ್ರಾರ್ಥನೆಗೆ ಸೂಕ್ತವಾಗಿತ್ತು. ತಪಸ್ಸು ಮತ್ತು ಏಕಾಂತ ಬಯಸುವವರಿಗೆ, ಧ್ಯಾನ ಮತ್ತು ಪ್ರಾರ್ಥನೆ ಮಾಡುವವರಿಗೆ ಈ ಸ್ಥಳವನ್ನು ಅರ್ಪಣೆ ಮಾಡಿದ್ದರು.

ನಾನು ಇಲ್ಲಿಗೆ ಬಂದಾಗ ಸುಮಾರು ನನ್ನ ಜೊತೆ ಹತ್ತು ಹುಡುಗರು ಇದ್ದರು ಮತ್ತು ಯಾವುದೇ ಹಿಂದಿನ ಅನುಭವವಿಲ್ಲದ ನನ್ನ ಹೊಸ ಜೀವನವನ್ನು ಪ್ರಾರಂಭಿಸಿದೆ.





ಆಶ್ರಮದ ಸುತ್ತಮುತ್ತಲಿನ ಪರಿಸರವು ತೆರೆದ ಪ್ರದೇಶವಾಗಿದ್ದು, ಬೆಳವಣಿಗೆ ಕುಂಠಿತಗೊಂಡು ವಿರಳವಾಗಿದ್ದ ಈಚಲಮರ ಮತ್ತು ಇರುವೆಗಳ ಹುತ್ತದಿಂದ ತೊಂದರೆಗೊಳಗಾಗುತ್ತಿದ್ದ ಮುಳ್ಳಿನ ಪೊದೆಗಳನ್ನು ಹೊರತುಪಡಿಸಿ ಖಾಲಿ ಪ್ರದೇಶವಾಗಿತ್ತು. ಗ್ರಾಮದ ಜನರು ಬಳಸುತ್ತಿದ್ದ ರಸ್ತೆಯ ತಿರುವಿನಿಂದ ಕೂಡಿದ ನಿರ್ಜನ ಬಯಲಾಗಿದ್ದು, ಬೆಳಕಿನಲ್ಲಿ ಕೆಂಪು ಮಿಶ್ರಿತ ಧೂಳು ಎದ್ದು ಬರುತ್ತಿತ್ತು.

ನಾನು ನನ್ನ ಶಾಲೆಯನ್ನು ನಾವು ತಿಳಿದುಕೊಂಡ ಪ್ರಾಚೀನ ಕಾಲದ ಆಶ್ರಮದ ರೀತಿಯಲ್ಲಿ ಇರಬೇಕೆಂದು ಬಯಸಿದೆ. ಅಲ್ಲಿ ಯಾವುದೇ ಐಷಾರಾಮಿ ಇಲ್ಲದ ಬಡವ ಮತ್ತು ಶ್ರೀಮಂತರು ತಪಸ್ವಿಗಳಂತೆ ವಾಸಿಸುತ್ತಿದ್ದರು. ನಿನ್ನೆಯ ಆದರ್ಶಗಳನ್ನು ಇಂದಿನ ಅಭ್ಯಾಸದೊಂದಿಗೆ ಅಳವಡಿಸಿಕೊಳ್ಳುವ ಶಿಕ್ಷಕರನ್ನು ನನಗೆ ಹುಡುಕಲು ಸಾಧ್ಯವಾಗಲಿಲ್ಲ. ಶಾಲೆಯನ್ನು ನನ್ನ ಅಲ್ಪ ಹಣದಿಂದ ಪ್ರಾರಂಭಿಸಿದೆ. ನಾನು ನನ್ನ ಎಲ್ಲಾ ಪುಸ್ತಕಗಳನ್ನು ಮತ್ತು ಕಾಪಿರೈಟ್ಸಗಳನ್ನು ಮಾರಾಟ ಮಾಡಿ ಶಾಲೆಯನ್ನು ಮುಂದುವರೆಸಿಕೊಂಡು ಹೋದೆ.

ಮೊದಲಿಗೆ ನನ್ನ ಲಕ್ಷ್ಯವು ಅಪ್ಪಟ ದೇಶಭಕ್ತಿಯಾಗಿತ್ತು ತದನಂತರ ಇದು ಆಧ್ಯಾತ್ಮಿಕತೆಯೆಡೆಗೆ ಸೆಳೆಯಿತು. ಬಡತನವು ನಮಗೆ ಜೀವನ ಮತ್ತು ಜಗತ್ತಿನ ಸಂಪೂರ್ಣವಾದ ಭಾವನೆಗಳನ್ನು ತೆರೆದಿಡುತ್ತದೆ.





ಬಾಲ್ಯದಿಂದ ಪ್ರೌಢಾವಸ್ಥೆವರೆಗೆ ಮತ್ತು ಪ್ರೌಢಾವಸ್ಥೆಯಿಂದ ಬೆಳೆದ ನಂತರವೂ ನಾವು ಕಲಿಕಾದೇವತೆಯ ಪದಗಳ ಹೊರೆಯನ್ನು ನಮ್ಮ ಬಾಗಿದ ಬೆನ್ನಿನ ಮೇಲೆ ಹೊತ್ತಿರುವ ಕೂಲಿಗಳು.

ಮಕ್ಕಳು ಜೀವನವನ್ನು ಪ್ರೀತಿಸುತ್ತಾರೆ ಮತ್ತು ಇದು ಅವರ ಮೊದಲ ಪ್ರೀತಿ. ಇದರ ಎಲ್ಲಾ ಬಣ್ಣ ಮತ್ತು ಚಲನೆ ಅವರ ಕುತೂಹಲವನ್ನು ಆಕರ್ಷಿಸುತ್ತದೆ. ಈ ಪ್ರೀತಿಯನ್ನು ಗಟ್ಟಿಗೊಳಿಸುವ ಬುದ್ಧಿವಂತಿಕೆಯ ಬಗ್ಗೆ ನಾವು ಖಾತರಿಪಡಿಸಿದ್ದೇವೆಯೇ?

ನಾನು ಮೊದಲು ಮಾಡಿದ ಕೆಲಸವೇನೆಂದರೆ ನನ್ನ ಮಗ ರತಿಯನ್ನು ಪಟ್ಟಣದಿಂದ ಹಳ್ಳಿಗೆ ಕರೆದುಕೊಂಡು ಹೋಗಿದ್ದು ಮತ್ತು ಎಲ್ಲಿಯವರೆಗೆ ಸಿಗುವುದೊ ಅಲ್ಲಿಯವರೆಗೆ ನಿಸರ್ಗದ ಸ್ವಾತಂತ್ರ್ಯವನ್ನು ಅವನಿಗೆ ದೊರಕುವಂತೆ ಮಾಡಿದ್ದು. ಅವನಿಗೆ ಈಜಲು ಮತ್ತು ಹುಟ್ಟು ಹಾಕಲು ಒಂದು ನದಿಯಿದೆ. ಅವನು ತನ್ನ ಸಮಯವನ್ನು ಬಯಲಿನಲ್ಲಿ ಮತ್ತು ಯಾವುದೇ ಪಟ್ಟಿಗಳಿಲ್ಲದ ಮರಳು ದಂಡೆಯಲ್ಲಿ ಕಳೆಯುತ್ತಿದ್ದನು. ಊಟಕ್ಕೆ ತಡವಾಗಿ ಬಂದರೂ ಅವನನ್ನು ಯಾರು ಪ್ರಶ್ನಿಸುತ್ತಿರಲಿಲ್ಲ. ಅವನಿಗೆ ಬ್ರಹ್ಮಾಂಡದ ನೈಜ ಅನುಭವವನ್ನು ಹೊಂದಲು ನನಗಿಂತ ಉತ್ತಮ ಅವಕಾಶವಿತ್ತು.





ಅದು 1905. ನಮ್ಮದೇ ಆದ ಜಡತ್ವ ಮತ್ತು ಅನಾಸಕ್ತಿ ಇದ್ದರೂ ನಾವು ನಮ್ಮ ದೇಶವನ್ನು ಗೆಲ್ಲಲೇ ಬೇಕು ಎಂಬ ಸತ್ಯಕ್ಕೆ ಪ್ರಾಧಾನ್ಯತೆಯನ್ನು ನೀಡುವುದರಲ್ಲಿ ನಾನು ವಿಫಲನಾಗಲಿಲ್ಲ, ಇದು ಯಾವುದೇ ವಿದೇಶಿಯರಿಂದಲ್ಲ.

ಕವಿತೆಯ ದೇವರ ಕ್ಷೇತ್ರದಂತಿದ್ದ ಶಾಂತಿನಿಕೇತನದಲ್ಲಿ ನಾನು ಬರೆಯುವ ಕೆಲಸ ಪ್ರಾರಂಭಿಸಿದೆ. ನನ್ನ ಆಶ್ರಮವನ್ನು ಸ್ಥಾಪಿಸಲು ಸಹಾಯದ ಮೂಲವನ್ನು ಹುಡುಕಿದೆನು ಮತ್ತು ನಾನು ಸಂತೋಷದಿಂದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಋತುಗಳ ಮತ್ತು ನಿಸರ್ಗದ ಆಚರಣೆಯ ಗೀತೆಗಳನ್ನು ತುಂಬಲು ಪ್ರಯತ್ನಿಸಿದೆ.

ಆಶ್ರಮವು ಕ್ರಿಯಾತ್ಮಕ ಸ್ಫೂರ್ತಿಯಿಂದ ಬೆಳೆಯಿತು.

ಶಾಲೆಯು ವಿದ್ಯಾರ್ಥಿಗಳ ಮನಸ್ಸನ್ನು ಕುರುಡು ಸಂಪ್ರದಾಯದಿಂದ ಮುಕ್ತಗೊಳಿಸಲು ಸ್ಥಾಪಿತವಾಯಿತು. ಇದು ಯಾವುದೇ ಜಾತಿ ಮತ್ತು ಕುಲ ಎಂಬ ಭೇದಭಾವವಿಲ್ಲದ ಮನುಕುಲಕ್ಕೆ ಗೌರವ ನೀಡುವಂತಹ ಕ್ರಿಯಾಶೀಲ ಒಗ್ಗಟ್ಟಿನ ಕಡೆಗೆ ಕೊಂಡೊಯ್ಯಿತು.





ಈ ಕ್ಷೇತ್ರದಲ್ಲಿ ನನಗೆ ಯಾವುದೇ ರೀತಿಯ ಅನುಭವವಿರಲಿಲ್ಲ. ಆದರೆ ನನಗೆ ಮಕ್ಕಳ ಮೇಲೆ ಅನುಕಂಪವಿದ್ದುದರಿಂದ ನನ್ನ ಮೇಲೆ ಅಗಾಧವಾದ ಆತ್ಮವಿಶ್ವಾಸವಿತ್ತು.

ಯಾವುದೇ ಅಡೆತಡೆಗಳಿಲ್ಲದ್ದರಿಂದ ನಾನು ಈ ಜಾಗವನ್ನು ಆಯ್ಕೆ ಮಾಡಿಕೊಂಡೆ. ಸ್ವಂತ ಕನಸನ್ನು ಸೃಷ್ಟಿಸಲು ಮನಸ್ಸು ಭಯರಹಿತ ಸ್ವಾತಂತ್ರವನ್ನು ಹೊಂದಿತ್ತು. ಹಾಗೆಯೇ ಋತುಗಳು ಅವುಗಳ ವರ್ಣಭರಿತ ಮತ್ತು ಸುಂದರತೆಯನ್ನು ಮನುಷ್ಯನ ಹೃದಯದಲ್ಲಿ ತುಂಬುವಂತೆ ಬಂದು ಹೋಗುತ್ತಿದ್ದವು.

ಇಲ್ಲಿ, ನಾನು ಕೆಲವು ಹುಡುಗರನ್ನು ನನ್ನ ಸುತ್ತಲೂ ಸೇರಿಸಿದೆ ಮತ್ತು ಅವರಿಗೆ ಪಾಠ ಹೇಳಿದೆ.





ನಾನು ಅವರ ಜೊತೆಗಾರನಾಗಿದ್ದೆ. ನಾನು ಅವರಿಗೆ ಹಾಡು ಹೇಳಿದೆ. ನಾನು ಸಂಗೀತದ ತುಣುಕುಗಳನ್ನು, ಗೀತರೂಪಕಗಳನ್ನು, ನಾಟಕಗಳ ಪ್ರದರ್ಶನಗಳನ್ನು ಸಂಯೋಜಿಸಿದೆ ಮತ್ತು ಅವರು ಈ ಕಾರ್ಯಕ್ರಮಗಳಲ್ಲಿ ಭಾಗಿಯಾದರು. ನಮ್ಮ ಶಾಲೆಯ ಪ್ರಾರಂಭದ ದಿನಗಳಲ್ಲಿ ನಾನು ಮಹಾಕಾವ್ಯವನ್ನು ಅವರಿಗಾಗಿ ಪಠಿಸಿದೆನು.

ಶಿಕ್ಷಣವು ಜೀವನದಿಂದ ಪ್ರತ್ಯೇಕವಾಗಿರದೆ ನಮ್ಮ ಜೀವನದ ಒಂದು ಭಾಗವಾಗಿರಬೇಕೆಂಬುದು ನನ್ನ ಆಲೋಚನೆಯಾಗಿತ್ತು ಮತ್ತು ಇದು ಮೂರ್ತ ಕಲ್ಪನೆಯಿಂದ ಕೂಡಿರಬೇಕು.

ಮಕ್ಕಳು ತಾವು ಯಾವುದನ್ನು ಮಾಡಬೇಕೆಂದಿದ್ದರೋ ಅದನ್ನು ಮಾಡಲು ಸಂಪೂರ್ಣ ಸ್ವಾತಂತ್ರವನ್ನು ಹೊಂದಿದ್ದರು, ನನಗೆ ಎಷ್ಟು ಸಾಧ್ಯವೊ ಅಷ್ಟು ಸ್ವಾತಂತ್ರ್ಯವನ್ನು ನೀಡಲು ಸಾಧ್ಯವಾಯಿತು. ಮತ್ತು ನಾನು ಅವರ ಎಲ್ಲಾ ಚಟುವಟಿಕೆಗಳನ್ನು ಹೆಚ್ಚು ಆಸಕ್ತಿದಾಯಕವಾಗಿರುವಂತೆ ಮಾಡಲು ಪ್ರಯತ್ನಿಸಿದೆ.



ಸುಪ್ತ ಮನಸ್ಥಿತಿಯು ಪ್ರಜ್ಞಾ ಮನಸ್ಥಿತಿಗಿಂತ ಬಹಳ ಚುರುಕಾಗಿರುತ್ತದೆ, ಆದ್ದರಿಂದ ಇದು ಎಲ್ಲಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಮುಖ್ಯವಾಗುತ್ತದೆ. ಅದು ಅವರ ಮನಸ್ಸನ್ನು ಉತ್ತೇಜಿಸಲು ಮತ್ತು ಆಸಕ್ತಿಯನ್ನು ಬೆಳೆಸಲು ಸಾಧ್ಯವಾಗುತ್ತದೆ.

ನಾನು ನನ್ನ ವಿದ್ಯಾರ್ಥಿಗಳಲ್ಲಿ ನಿಸರ್ಗದ ಮೇಲೆ, ಜೀವನದ ಸಾರವನ್ನು ರೂಪಿಸುವ ಎಲ್ಲಾ ವಸ್ತುಗಳ ಮೇಲೆ ಪ್ರೀತಿಯನ್ನು ರೂಢಿಸಿಕೊಳ್ಳಲು ಪ್ರಯತ್ನಿಸಿದೆನು. ನಾವು ಪ್ರತಿಯೊಂದು ಋತುಗಳಲ್ಲಿ ಆಗುವ ಬದಲಾವಣೆ – ವಸಂತ, ಬೇಸಿಗೆ, ಮಳೆ ಮತ್ತು ಚಳಿಗಾಲವನ್ನು ಆಚರಿಸಿದೆವು. ಶಿಕ್ಷಣವು ಸಂತೋಷದಾಯಕವಾದ ಒಂದು ಚಟುವಟಿಕೆ. ಅದು ನಿಸರ್ಗದೊಂದಿಗೆ ಸಾಮರಸ್ಯದಿಂದ ಬದುಕುವಂತಹ ಸ್ವಾಭಾವಿಕವಾದ ಪ್ರವೃತ್ತಿಯನ್ನು ನಿರ್ಮಾಣಮಾಡುವಂತಹ ವಾತಾವರಣವನ್ನು ಸೃಷ್ಟಿಸಿತು.









ನಾನು ಸಂಗೀತ ಸಂಜೆಯನ್ನು ಅನುಭವಿಸಿದೆನು ಅದು ಸಂಗೀತ ತರಗತಿಗಳ ರೀತಿ ಇರಲಿಲ್ಲ. ಆ ಹುಡುಗರು ಸಂಗೀತದ ಬಗ್ಗೆ ವಿಶೇಷವಾದ ಪ್ರೀತಿಯನ್ನೇನು ಹೊಂದಿರಲಿಲ್ಲ, ಹೊರಗಡೆಯಿಂದ ನಮ್ಮ ಹಾಡುಗಳನ್ನು ಕೇಳುತ್ತಿದ್ದರು. ತುಂಬಾ ಕುತೂಹಲದಿಂದ ಮತ್ತು ನಿಧಾನವಾಗಿ ಅದರ ಕಡೆ ಬಂದರು. ನಾನು ಶ್ರೇಷ್ಠ ಕಲಾವಿದರನ್ನು ಇಲ್ಲಿ ವಾಸಿಸಲು ಆಹ್ವಾನಿಸಿದೆ. ಅವರು ಅವರ ಕೆಲಸವನ್ನು ಮಾಡುವಾಗ, ವಿದ್ಯಾರ್ಥಿಗಳು ಅವರನ್ನು ಗಮನಿಸಿದರು ಮತ್ತು ಆ ಶ್ರೇಷ್ಠ ಕೆಲಸಗಳು ಹೇಗೆ ಅಭಿವೃದ್ಧಿ ಆಗುತ್ತವೆಂಬುದನ್ನು ದಿನೇ ದಿನೇ ತಿಳಿದುಕೊಂಡರು.

ನಾನು ಉಪನ್ಯಾಸಕರನ್ನು ಯುರೋಪು ಮತ್ತು ದೂರದ ಪೌರಾತ್ಯದಿಂದ ಬರುವಂತೆ ಮತ್ತು ನಮ್ಮೊಡನೆ ಇರುವಂತೆ ಮಾಡಲು ಸದಾ ಪ್ರಯತ್ನಿಸಿದೆ. ನಮ್ಮ ವಿದ್ಯಾರ್ಥಿಗಳು ವಿದೇಶಿ ಅತಿಥಿಗಳ ಜೊತೆಗೆ ಬಹಳ ಸ್ವಾಭಾವಿಕವಾಗಿರುತ್ತಿದ್ದರು. ಮನಸ್ಸು ಎಲ್ಲಾ ವಿಧದಲ್ಲೂ ಸ್ವಾತಂತ್ರ್ಯವನ್ನು ಹುಡುಕುವಂತಿರಬೇಕು ಮತ್ತು ನಮ್ಮ ಮಕ್ಕಳು ದೇಶ, ಜನಾಂಗ, ಪಂಥ ಮತ್ತು ಪಂಗಡಗಳೆಂಬ ನಿರ್ಬಂಧವನ್ನು ಮೀರಿ ಸ್ವಾತಂತ್ರ್ಯವನ್ನು ಹೊಂದಿದ್ದಾರೆ ಎಂಬುದು ನನ್ನ ಖಚಿತವಾದ ಆಲೋಚನೆಯಾಗಿತ್ತು.

ವಿದ್ಯಾರ್ಥಿಗಳು ಸ್ವಯಂ ಆಡಳಿತದ ಮೂಲಕ ಜವಾಬ್ದಾರಿ ಮತ್ತು ಶಿಸ್ತನ್ನು ಅರ್ಥ ಮಾಡಿಕೊಂಡಿದ್ದರು ಎಂಬುವುದು ಪ್ರಾಮುಖ್ಯವಾಗಿತ್ತು. ಸಮಿತಿಗಳು ಹುಡುಗರಿಂದ ರಚನೆಯಾಗಿದ್ದವು ಮತ್ತು ಅವು ಇನ್ನೂ ಶಾಲಾ ಜೀವನದ ಎಲ್ಲಾ ಅಂಶಗಳ ಜೊತೆಗೆ ವ್ಯವಹರಿಸುವ ಉದ್ದೇಶವನ್ನು ಇಟ್ಟುಕೊಂಡಿದ್ದ ಹುಡುಗರಿಗೆ ತಮ್ಮಲ್ಲಿ ಪ್ರಮುಖ ಆಸಕ್ತಿ ಹೊಂದುವಂತಾಯಿತು.





## 1921ರಲ್ಲಿ ಎಲ್‌ಮಿರಿಸ್ಟ್‌ರೊಂದಿಗೆ ಶ್ರೀನಿಕೇತನ ನನ್ನ ಗ್ರಾಮೀಣ ಪುನರ್‌ನಿರ್ಮಾಣ ಶಾಲೆ

**ನಾನು ಅಮೇರಿಕಾದ ಕೃಷಿ ವಿಜ್ಞಾನಿಯಾದ ಲಿಯಾನಾರ್ಡ್ ಎಲ್‌ಮಿರಿಸ್ಟರಿಗೆ ಗ್ರಾಮೀಣ ಪುನರ್‌ನಿರ್ಮಾಣದ ಬಗ್ಗೆ ಪತ್ರ ಬರೆದೆನು. ಅವರು ಭಾರತದಲ್ಲಿ ಕೆಲಸಮಾಡಲು ಆಸಕ್ತಿ ತೋರಿಸಿದ್ದರು.**

"ಪಶ್ಚಿಮ ಬಂಗಾಳದಲ್ಲಿರುವ ನನ್ನ ಶಾಲೆ ಶಾಂತಿನಿಕೇತನದ ಸುತ್ತ ಮುತ್ತಲಿನ ಗ್ರಾಮಗಳ ಪ್ರಗತಿ ಕುಂಠಿತಗೊಳ್ಳುವಂತೆ ತೋರುತ್ತಿದೆ. ಹಿಂದುಗಳು, ಮುಸ್ಲಿಮರು, ಪ್ರಾಚೀನ ಸಂತಾಲರು ಮತ್ತು ಇತರರು ಒಂದು ಕಾಲದಲ್ಲಿ ತಕ್ಕ ಮಟ್ಟಿಗೆ ಆರ್ಥಿಕ, ಸಾಮಾಜಿಕ ಸ್ಥಿತಿ ಮತ್ತು ಸಂಸ್ಕೃತಿಯನ್ನು ಅನುಭವಿಸಿಕೊಂಡಿದ್ದರು. ಆದರೆ ಅದು ಯಾವುದು ಉಳಿದುಕೊಂಡಿಲ್ಲ. ಗ್ರಾಮಸ್ಥರಿಗೆ ತಮಗೆ ತಾವೇ ಸಹಾಯ ಮಾಡಲು ಸಾಧ್ಯವಾಗುತ್ತಿಲ್ಲ. ನಾನು ಯುವಕನಾಗಿದ್ದಾಗ, ನನ್ನ ತಂದೆ ಪಶ್ಚಿಮ ಬಂಗಾಳದಲ್ಲಿರುವ ನಮ್ಮ ಕುಟುಂಬದ ಎಸ್ಟೇಟಿನ ಉಸ್ತುವಾರಿಯನ್ನು ನನಗೆ ನೀಡಿದ್ದರು ಮತ್ತು ಅಲ್ಲಿ ನಾನು ನನ್ನದೇ ಆದ ಪ್ರಯೋಗಗಳನ್ನು ಪ್ರಯತ್ನಿಸಿದೆ. ಕೆಲವು ವರ್ಷಗಳ ಹಿಂದೆ ನನ್ನ ಶಾಲೆ ಶಾಂತಿನಿಕೇತನದಿಂದ ಒಂದೂವರೆ ಮೈಲು ದೂರದ ಸೂರಲ್ ಎಂಬ ಗ್ರಾಮದ ಹೊರಭಾಗದಲ್ಲಿ ಹೆಚ್ಚಿನ ಪ್ರಯೋಗಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಕೃಷಿ ಜಮೀನು ಖರೀದಿಸಿದೆ. ತಾವು 1917ರಲ್ಲಿ ಭಾರತಕ್ಕೆ ಭೇಟಿ ನೀಡಿ ಹಳ್ಳಿಗಳು ಮತ್ತು ಅಲ್ಲಿನ ಸಮಸ್ಯೆಗಳನ್ನು ನೋಡಿ ಆಸಕ್ತಿ ತೋರಿದ್ದೀರಿ. ಭಾರತಕ್ಕೆ ಬನ್ನಿ ನನ್ನ ಜಮೀನಿನಲ್ಲಿ ಜೀವಿಸಿ. ಇಲ್ಲಿ ಏನು ನಡೆಯುತ್ತಿದೆ ಎಂದು ಕಂಡು ಹಿಡಿಯಲು ಪ್ರಯತ್ನಿಸಿ ಮತ್ತು ಸಮಸ್ಯೆಗೆ ಕಾರಣವೇನು? ಗ್ರಾಮಸ್ಥರು ತಮಗೆ ತಾವೇ ಸಹಾಯ ಮಾಡಲು ಹಾಗೂ ತಮ್ಮ ಕಾಲ ಮೇಲೆ ನಿಲ್ಲಲು ತಾವೇನು ಸಹಾಯ ಮಾಡಬಹುದು? ನಿಮಗೆ ಸಾಧ್ಯವಾದರೆ ನನ್ನ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳಿಗೆ ತರಬೇತಿ ನೀಡಿ.

ನೀವು ಬರುತ್ತೀರಾ? ಹಾಗಾದರೆ ಮುಂದಿನ ದಿನಗಳಲ್ಲಿ ನಾವೇಕೆ ಒಂದೇ ದೋಣಿಯಲ್ಲಿ ಪ್ರಯಾಣ ಮಾಡಬಾರದು?"

## ಎಲ್‌ಮಿರಿಸ್ಟ್ ವಿವರಿಸಿದ್ದಾರೆ......

1921ರ ನವೆಂಬರ್‌ನಲ್ಲಿ ನಾನು ಬೋಲ್‌ಪುರ ತಲುಪಿದೆ ಮತ್ತು ಪ್ರೀತಿಯಿಂದ "ಗುರುದೇವ" ಎಂದು ಕರೆಯುವ ಠಾಗೋರರನ್ನು ಭೇಟಿ ಮಾಡಿದೆ. ಮಾವಿನ ಮರದ ನೆರಳಲ್ಲಿ ಕುಳಿತ ದಯಾಮಯಿ ಹಿರಿಯ ಕವಿಯಾದ ಅವರು ಆಹ್ಲಾದಕರವಾದ ಶಬ್ದಗಳಿಂದ ಸ್ವಾಗತಿಸಿದರು. ನಾವು ಒಟ್ಟಿಗೆ ಕುಳಿತು ಯೋಜನೆಯನ್ನು ಚರ್ಚೆ ಮಾಡಿದೆವು. ಅನಂತರ ಅವರು ಹಲವು ವರ್ಷಗಳಿಂದ ನಾವು ಇಂತಹ ಯೋಜನೆಗಳಿಗೆ ಕಾಯುತ್ತಿದ್ದೆವು ಎಂದು ಹೇಳಿದರು.

ಅದಕ್ಕನುಗುಣವಾಗಿ ನಮ್ಮ ಯೋಜನೆಯನ್ನು ಉದ್ದೇಶಿತ ರೀತಿಯಲ್ಲಿ ಅನುಷ್ಠಾನ ಮಾಡಲು ನಾನು ಇತರರೊಂದಿಗೆ ಸುರಲ್‌ನಲ್ಲಿರುವ ಕೃಷಿ ಭೂಮಿಗೆ ಭೇಟಿ ನೀಡಿದೆನು. 1922 ಫೆಬ್ರವರಿಯಲ್ಲಿ ನಾವು ಕೆಲವು ಸಿಬ್ಬಂದಿಗಳು, ಕಾಲೇಜಿನ ಸುಮಾರು ಹತ್ತು ವಿದ್ಯಾರ್ಥಿಗಳು ಗುರುದೇವ ಅವರ ಜಮೀನಿನಲ್ಲಿ ವಾಸಿಸಲು ಪ್ರಾರಂಭಿಸಿದೆವು. ಅವರೆಲ್ಲರೂ ಮುಂದೆ ರೈತರಾಗಬೇಕೆಂದು ಬಯಸಿದ್ದರು. ನಾವು ಶೌಚಾಲಯವನ್ನು ನಿರ್ಮಿಸಿದೆವು. ಹೂದೋಟಗಳು, ಮನೆಗಳು ಮತ್ತು ಕಾರ್ಯಾಗಾರಗಳನ್ನು ಪ್ರಾರಂಭಿಸಿದೆವು. ಮಂಗನ ಹಾವಳಿಯನ್ನು ತಪ್ಪಿಸಿದೆವು ಹಾಗೂ ನಾವು ಅಲ್ಲಿ ನೆಲೆಯೂರಿದೆವು. ಕೆಲವು ತಿಂಗಳುಗಳ ನಂತರ ನಾವು "ಗ್ರಾಮೀಣ ಪುನರ್‌ನಿರ್ಮಾಣ ಸಂಸ್ಥೆ" ಎಂದು ಕರೆದೆವು. ನಂತರ ಠಾಗೋರರು ಅದನ್ನು "ಶ್ರೀನಿಕೇತನ" ಎಂದು ಕರೆದರು. ಇದು ಸಂಸ್ಕೃತದಲ್ಲಿ "ಸಂಪತ್ತಿನ ನೆಲೆ" ಎಂದು ಅರ್ಥಕೊಡುತ್ತದೆ.

ಓರ್ವ ಶಿಕ್ಷಕನಾಗಿ ಸ್ವಂತ ಅನುಭವ ಮತ್ತು ಶ್ರೀನಿಕೇತನದಲ್ಲಿ ಹಳ್ಳಿಯ ಹುಡುಗರೊಂದಿಗೆ ಮಾಡಿದ ಕೆಲಸದ ಅಧ್ಯಯನ ಮತ್ತು ಅನುಭವ ಗ್ರಾಮೀಣ ಪ್ರದೇಶದ ನಿಸರ್ಗ ಮತ್ತು ಜೀವನ, ಸೌಂದರ್ಯ ಮತ್ತು ಸಮಸ್ಯೆಗಳೊಂದಿಗೆ ನೇರ ಸಂಪರ್ಕವಿರುವ ಹೊಸ ವಿಧದ ಶಾಲೆಗಳು ಭಾರತದ ಹಳ್ಳಿಯ ಮಕ್ಕಳಿಗೆ ಅಗತ್ಯವಿದೆ ಎಂದು ಠಾಗೋರರಿಗೆ ಮನವರಿಕೆಯಾಯಿತು.





ಮೂಲ ನಿವಾಸಿ ಸಂತಾಲ ಬುಡಕಟ್ಟು ಜನಾಂಗದವರು ಭೂರಹಿತರು. ಇವರು ಕೂಲಿ ಕೆಲಸವನ್ನು ಉದ್ಯೋಗವನ್ನಾಗಿಸಿಕೊಂಡವರು. ಇವರು ಉದ್ಯೋಗವನ್ನರಸಿಕೊಂಡು ಒಂದೆಡೆಯಿಂದ ಇನ್ನೊಂದೆಡೆಗೆ ಸರಣಿ ವಲಸೆ ಹೋಗುವುದನ್ನು ನೋಡಬಹುದು. ಕೆಂಪು ಹೂವನ್ನು ಮುಡಿದುಕೊಂಡ ಮೂಟೆ ಹೊತ್ತ ಮಹಿಳೆಯರು, ಹೆಗಲ ಮೇಲೆ ಬಿದಿರಿನ ತುಂಡು ಅದರ ಒಂದು ತುದಿಯ ಬುಟ್ಟಿಯಲ್ಲಿ ಮಗುವನ್ನು ಮತ್ತೊಂದು ತುದಿಯ ಬುಟ್ಟಿಯಲ್ಲಿ ಅಡುಗೆಗಾಗಿ ಮಣ್ಣಿನ ಪಾತ್ರೆಗಳನ್ನು ಗಂಡಸರು ಇಟ್ಟುಕೊಂಡಿದ್ದರು. ಕೆಲವೊಮ್ಮೆ ಅವರು ಕಾಡು ಹಂದಿಯನ್ನು ಹುರಿದು ಹಬ್ಬದೂಟ ಮಾಡಲು ಅದನ್ನು ಕೋಲಿಗೆ ಕಟ್ಟಿ ಇಬ್ಬರು ಸಾಗಿಸುತ್ತಿದ್ದರು.

# ಪಿಯರ್ಸನ್ ಅವರ ಪುಸ್ತಕ – ಠಾಗೋರರ ಸ್ಫೂರ್ತಿ...

### ಶಾಂತಿನಿಕೇತನದ ಪ್ರಕಟಣೆ – 1916

ತರಬೇತಿಗಾಗಿ ಬರುವ ಹುಡುಗರಿಗೆ ಈ ಆಶ್ರಮವು ತುಂಬಾ ದೂರದಲ್ಲಿಯೇ ಮತ್ತು ಮಠದಂತೆ ತೋರುತ್ತಿದೆಯೇ, ಅವರು ಶಾಲೆಯಿಂದ ನಿರ್ಗಮಿಸಿದಾಗ ಆಧುನಿಕ ಜಗತ್ತಿನ ಹೋರಾಟ ನಡೆಸಬೇಕಾಗಬಹುದೇ? ನಾವು ಹಾಗೆ ಹೇಳಲು ಸಾಧ್ಯವಿಲ್ಲ. ಬಹುಶಃ ಹುಡುಗರು ಇಲ್ಲಿ ಆಧುನಿಕ ಜಗತ್ತಿನ ಅಗತ್ಯಗಳನ್ನು ಪಡೆದುಕೊಂಡು ಹಾಗೂ ಸಮತೂಕದ ಜೀವನವನ್ನು ನಡೆಸಲು ಬೇಕಾದಂತಹ ಮನಸ್ಸಿನ ಒತ್ತಡ ನಿವಾರಣೋಪಾಯಕ್ಕೆ ಬೇಕಾದ ಜ್ಞಾನ ಸಂಪತ್ತು ನೀಡಿದ್ದರೂ ಗೊಂದಲಗಳ ನಡುವೆ ಗುರಿಯನ್ನು ತಲುಪಬಹುದೇ? ಶಿಕ್ಷಣದಲ್ಲಿನ ಪ್ರಯೋಗದ ಪ್ರಾಯೋಗಿಕ ಫಲಿತಾಂಶ ಯಾವುದೇ ಇರಲಿ ಅದು ಹಳೆಯ ಹಿಂದೂ ಧರ್ಮದ ಬೋಧನಾ ವ್ಯವಸ್ಥೆಯ ಉತ್ತಮ ಸಂಪ್ರದಾಯಗಳನ್ನು ಆಧುನಿಕ ವಿಧಾನದ ಆರೋಗ್ಯಕರ ಅಂಶಗಳೊಂದಿಗೆ ಒಗ್ಗೂಡಿಸಲು ಶ್ರಮಿಸುತ್ತದೆ. ಇವು ಉನ್ನತ ಮಟ್ಟದ ಆದರ್ಶಗಳು ಎಂಬುದರಲ್ಲಿ ಸಂದೇಹವಿಲ್ಲ. ಈ ಆದರ್ಶಗಳ ಬಗ್ಗೆ ಮತ್ತು ಶಾಲೆಯ ಶಿಕ್ಷಕರು ಹಾಗೂ ಹುಡುಗರು ಇವನ್ನು ಅಭ್ಯಾಸ ಮಾಡಲು ಹೇಗೆ ಶ್ರಮಿಸಿದರು ಎಂದು ಹೇಳುತ್ತೇನೆ.

ಪಾಶ್ಚಾತ್ಯರ ದೃಷ್ಟಿಯಲ್ಲಿ ಈ ಶಾಲೆಯು ಹೊರನೋಟಕ್ಕೆ ಬಡತನವನ್ನು ಸೂಚಿಸುತ್ತದೆ. ಪರಿಣಾಮಕಾರಿ ಮತ್ತು ದುಬಾರಿ ಸಲಕರಣೆಗಳಿಗೆ ಒತ್ತು ನೀಡುವುದು ಪಶ್ಚಿಮದಲ್ಲಿರುವ ಕಲಿಕಾ ಸಂಸ್ಥೆಯ ವಿಶಿಷ್ಟ ಲಕ್ಷಣವಾಗಿತ್ತು. ಅದನ್ನು ಭಾರತ ಎಂದಿಗೂ ಒಪ್ಪಿಕೊಳ್ಳಲಿಲ್ಲ. ಇಲ್ಲಿ ಸರಳ ಜೀವನವು ನಿಜವಾದ ಶಿಕ್ಷಣದ ಒಂದು ಪ್ರಮುಖ ಅಂಶವೆಂದು ಪರಿಗಣಿಸಲಾಗಿತ್ತು. ಇಲ್ಲಿನ ಎಲ್ಲಾ ಕಟ್ಟಡಗಳು ಅತ್ಯಂತ ಸರಳವಾಗಿದ್ದು, ಅದನ್ನು ಹುಡುಗರು ದಿನನಿತ್ಯದ ಜೀವನದಲ್ಲಿ ಬಳಸುತ್ತಿದ್ದರು.












ಕೆಲವೊಮ್ಮೆ ಶಾಲೆಯಲ್ಲಿ ಎಲ್ಲಾ ಮಕ್ಕಳಿಗೂ ಒಂದು ದಿನದ ಅಥವಾ ಹಲವು ದಿನಗಳ ಪ್ರವಾಸವನ್ನು ಐತಿಹಾಸಿಕ ಸ್ಥಳಗಳಿಗೆ ಯೋಜಿಸಲಾಗುತ್ತಿತ್ತು. ಆ ದಿನಗಳಲ್ಲಿ ಬಯಲು ಪ್ರದೇಶದಲ್ಲಿ ಹಾಡುವುದು ಮತ್ತು ಆಟವಾಡುವುದು ಕಾರ್ಯಕ್ರಮದ ಮುಖ್ಯ ಭಾಗವಾಗಿದ್ದು, ಅದರೊಂದಿಗೆ ಕೆಲವು ಶಿಕ್ಷಕರು ಕಥೆಗಳನ್ನು ಹೇಳುತಿದ್ದರು. ವಿಶೇಷವಾಗಿ ಹಲವಾರು ಹುಡುಗರು ಶಿಕ್ಷಕರೊಂದಿಗೆ ಚಂದ್ರನ ಬೆಳಕಿನಲ್ಲಿ ತುಂಬಾ ದೂರ ಕಾಲ್ನಡಿಗೆಯಲ್ಲಿ ಹೋಗುತ್ತಿದ್ದರು. ಇದರಿಂದ ಮಕ್ಕಳು ಮತ್ತು ಶಿಕ್ಷಕರ ನಡುವೆ ಆಳವಾದ ಮತ್ತು ಬಲವಾದ ಸಂಬಂಧ ಬೆಳೆಯಿತು. ಶಿಕ್ಷಕರು ಹುಡುಗರೊಂದಿಗೆ ವಿದ್ಯಾರ್ಥಿ ನಿಲಯದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಅವರ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದರು ಮತ್ತು ದಿನನಿತ್ಯದ ಜೀವನವನ್ನು ಹಂಚಿಕೊಳ್ಳುತ್ತಿದ್ದರು.



ಹುಡುಗರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳಲು ಹೆಚ್ಚಿನ ಮಟ್ಟಿಗೆ ವಿಶ್ವಾಸವನ್ನು ಹೊಂದಿದ್ದರು. ಶಾಲೆಯ ವಿವಿಧ ವಿಭಾಗಗಳಲ್ಲಿ ತಮ್ಮದೇ ಆದ ಸಮಿತಿಗಳಿದ್ದು ಆಶ್ರಮದಲ್ಲಿ ಎಲ್ಲಾ ಮಕ್ಕಳು ಸೇರಿ ಸಾಮಾನ್ಯ ಸಭೆಯನ್ನು ಸಂಘಟಿಸುತ್ತಿದ್ದರು. ಇಲ್ಲಿ ಇಡೀ ಶಾಲೆಗೆ ಸಂಬಂಧಪಟ್ಟ ಪ್ರಶ್ನೆಗಳನ್ನು ಚರ್ಚಿಸಲಾಗುತ್ತಿತ್ತು. ಪರೀಕ್ಷೆಗಳ ಸಂದರ್ಭದಲ್ಲಿ ನಂಬಿಕೆಯ ಆಧಾರದ ಮೇಲೆ ಅವರನ್ನು ಅವರ ಪಾಡಿಗೆ ಬಿಡಲಾಗುತ್ತಿತ್ತು. ಪರೀಕ್ಷೆ ನಡೆಯುವ ಸಂದರ್ಭದಲ್ಲಿ ಹುಡುಗರು ಯಾವುದೇ ಸ್ಥಳಗಳಲ್ಲಿ ತಮ್ಮ ಉತ್ತರವನ್ನು ಬರೆಯಬಹುದಾಗಿತ್ತು. ಅಲ್ಲದೆ ಯಾರಿಗೂ ಕಾಣದ ಸ್ಥಳವಾದ ಎತ್ತರದ ಮರದ ಕೊಂಬೆ ರೆಂಬೆಯಲ್ಲಿ ಕುಳಿತು ಸಹಾ ಬರೆಯುತ್ತಿದ್ದರು.

## ಸತ್ಯಜಿತ್ ರೇ......

ಶಾಂತಿನಿಕೇತನದಲ್ಲಿ ನಾನು ಕಳೆದ ಮೂರು ವರ್ಷಗಳು ನನ್ನ ಜೀವನದ ಅತ್ಯಂತ ಫಲಪ್ರದವೆಂದು ಪರಿಗಣಿಸಿಕೊಂಡಿದ್ದೇನೆ. ಶಾಂತಿನಿಕೇತನದಲ್ಲಿದ್ದ ಪೌರಸ್ತ್ಯ ಮತ್ತು ಭಾರತದ ಕಲೆಯ ಉಜ್ವಲತೆ ಮೊದಲ ಬಾರಿಗೆ ನನ್ನ ಕಣ್ಣು ತೆರೆಯಿಸಿತು. ಅಲ್ಲಿಯವರೆಗೆ ನಾನು ಸಂಪೂರ್ಣವಾಗಿ ಪಾಶ್ಚಾತ್ಯ ಕಲೆ, ಸಂಗೀತ ಮತ್ತು ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದ್ದೆ. ಶಾಂತಿನಿಕೇತನವು ನನ್ನನ್ನು ಪಾಶ್ಚಾತ್ಯ ಹಾಗೂ ಪೌರಸ್ತ್ಯ ಕಲೆಗಳಿಂದ ಕೂಡಿದ ಸಂಪನ್ನನಾಗಿ ಮಾಡಿತು.

1921 ರಲ್ಲಿ ಸತ್ಯಜಿತ್ ರೇ ಅವರು ಪ್ರಖ್ಯಾತ ಕಲಾವಿದರು, ಸಾಹಿತಿಗಳು, ಸಂಗೀತಗಾರರು, ವಿಜ್ಞಾನಿಗಳು ಮತ್ತು ವೈದ್ಯರ ಕುಟುಂಬದಲ್ಲಿ ಜನಿಸಿದವರು. ತಮ್ಮ ತಾಯಿಯ ಹಠದಿಂದ ಮತ್ತು ದಿವಂಗತ ತಂದೆಯ ಸ್ನೇಹಿತ ಠಾಗೋರರ ಪ್ರೋತ್ಸಾಹದಿಂದ ಠಾಗೋರರ ಶಾಲೆಗೆ ಸೇರಿದರು. ಶಾಂತಿನಿಕೇತನದ ಕಲಾಭವನದಲ್ಲಿ ಚಿತ್ರಕಲೆಯ ತರಬೇತಿಯನ್ನು ಪಡೆದರು. ಶಾಂತಿನಿಕೇತನದಲ್ಲಿರುವಾಗ ರೇಯವರು ಮಹಾನ್ ಶಿಕ್ಷಕರಾದ ನಂದಲಾಲ್ ಬೋಸ್ ಹಾಗೂ ಆಧುನಿಕ ಭಾರತದ ಕಲಾ ಶಿಕ್ಷಣದ ಅನ್ವೇಷಕರಿಂದ ಚಿತ್ರಕಲೆಯನ್ನು ಕಲಿತರು. ಅವರ ಮೇಲೆ ಶಾಶ್ವತ ಪ್ರಭಾವ ಬೀರಿದ ಇನ್ನೊಬ್ಬ ಶಿಕ್ಷಕರು ಬಿಂದೇ ಬಿಹಾರಿ ಮುಖರ್ಜಿಯವರು. ಕ್ಯಾಲಿಗ್ರಾಫಿ ಅಂಶಗಳು ಅವರನ್ನು ಪ್ರವೇಶಿಸಿರದಿದ್ದರೆ ಅವರು ಸಮಗ್ರ ಕಲೆಗಳನ್ನು ಹೊಂದಿದ ಆಧುನಿಕವಾದಿಯಾಗುತ್ತಿದ್ದರು. ಚಿತ್ರಕಲೆಯಲ್ಲಿ ಸ್ವಾಭಾವಿಕ ಪ್ರತಿಭೆ ಹೊಂದಿದ್ದ ರೇ ಅವರು ನಂತರ ಈ ಅಂಶಗಳನ್ನು ತಮ್ಮ ಸಚಿತ್ರ ವಿವರಣೆಗಳು ಮತ್ತು ಚಿತ್ರಾತ್ಮಕ ವಿನ್ಯಾಸಗಳಲ್ಲಿ ಅಳವಡಿಸಿ ಅಭಿವೃದ್ಧಿಪಡಿಸಿದರು.

–ದಿಲೀಪ್ ಬಸು









## ಅಮರ್ತ್ಯ ಸೇನ್.....

ನಾನು ಶಾಂತಿನಿಕೇತನದಲ್ಲಿ ಶಿಕ್ಷಣವನ್ನು ಪಡೆದೆ ಹಾಗೂ ಠಾಗೋರರನ್ನು ಭಾಗಶ: ಶಿಕ್ಷಕರಾಗಿ ನೋಡಿದೆ. ಈ ಶಾಲೆಯು ಅನೇಕ ರೀತಿಯಲ್ಲಿ ಅಸಾಮಾನ್ಯವಾಗಿತ್ತು. ಹೇಗೆಂದರೆ ಎಲ್ಲರಿಗೂ ಬೇಕಾಗುವ ಪ್ರಯೋಗಾಲಯದ ಹೊರತಾಗಿ ತರಗತಿಗಳು ಹೊರಾಂಗಣದಲ್ಲಿ (ಹವಾಮಾನ ಪೂರಕವಾಗಿದ್ದಾಗ) ನಡೆಯುವುದು ಇಲ್ಲಿನ ವಿಭಿನ್ನತೆಯಾಗಿತ್ತು. ಸ್ವಾಭಾವಿಕವಾದ ವ್ಯವಸ್ಥೆಯಲ್ಲಿ ಕಲಿಯುವುದರಿಂದ ನಿಜವಾದ ಜ್ಞಾನದ ಗಳಿಕೆಯಾಗುತ್ತದೆ ಎಂಬುದು ರವೀಂದ್ರನಾಥ ಠಾಗೋರರ ನಂಬಿಕೆಯಾಗಿತ್ತು ಎಂದು ನಾವು ತಿಳಿದುಕೊಂಡಿದ್ದೆವು (ನಮ್ಮಲ್ಲಿ ಕೆಲವರು ಈ ಸಿದ್ಧಾಂತದ ಬಗ್ಗೆ ವಾದಿಸಿದರು). ಹೊರಾಂಗಣ ಶಿಕ್ಷಣದ ಅತ್ಯಂತ ಆಕರ್ಷಕ ಮತ್ತು ಆಹ್ಲಾದಕರವಾದ ಅನುಭವವನ್ನು ನಾವು ಸಾಮಾನ್ಯವಾಗಿ ಪಡೆದುಕೊಂಡಿದ್ದೆವು.

ಶೈಕ್ಷಣಿಕವಾಗಿ, ಈ ನಮ್ಮ ಶಾಲೆಯಲ್ಲಿ ನಿರ್ದಿಷ್ಟವಾದ ನಿಖರತೆಯಿರಲಿಲ್ಲ (ನಮ್ಮಲ್ಲಿ ಯಾವುದೇ ಪರೀಕ್ಷೆಗಳೇ ಇರಲಿಲ್ಲ) ಮತ್ತು ಸಾಮಾನ್ಯವಾದ ಶೈಕ್ಷಣಿಕ ಗುಣಮಟ್ಟ ಅಳೆಯಲು ಸಾಧ್ಯವಿಲ್ಲದಿದ್ದರೂ, ಕೊಲ್ಕತ್ತಾದ ಕೆಲವು ಉತ್ತಮ ಶಾಲೆಗಳೊಂದಿಗೆ ಸ್ಪರ್ಧಿಸುತ್ತಿತ್ತು. ಆದರೆ ಗಮನಾರ್ಹ ಸಂಗತಿಯೇನೆಂದರೆ, ತರಗತಿಯಲ್ಲಿ ಭಾರತೀಯ ಸಾಂಪ್ರದಾಯಿಕ ಸಾಹಿತ್ಯದಿಂದ ಸಮಕಾಲೀನ ಸಾಹಿತ್ಯದವರೆಗೆ ಅಲ್ಲದೆ ಶಾಸ್ತ್ರೀಯ ಪಾಶ್ಚಾತ್ಯ ಚಿಂತನೆಗಳು ಹಾಗೂ ಚೀನಾ, ಜಪಾನ್ ಮತ್ತು ಇತರ ದೇಶಗಳ ಸಂಸ್ಕೃತಿಯ ಚರ್ಚೆಗಳು ನಡೆಯುತ್ತಿದ್ದವು. ಶಾಲೆಯಲ್ಲಿ ನಡೆಯುವ ವಿವಿಧ ಆಚರಣೆಗಳು ಕೂಡಾ ತದ್ವಿರುದ್ಧವಾಗಿರುವುದರೊಂದಿಗೆ, ಸಾಂಸ್ಕೃತಿಕ ಸಂಪ್ರದಾಯವಾದ ಮತ್ತು ಪ್ರತ್ಯೇಕತಾವಾದದ ಮೇಲೆ ಒಲವು ತೋರಿಕೊಂಡು, ಕಾಲಕಾಲಕ್ಕೆ ಭಾರತವನ್ನು ಹಿಡಿತದಲ್ಲಿಟ್ಟುಕೊಂಡಿತ್ತು.

## ಅಶೋಕ್ ಸರ್ಕಾರ್ ........

**ಶಾಂತಿ ನಿಕೇತನ, ಪಥ ಭವನದಲ್ಲಿ ವಿದ್ಯಾಭ್ಯಾಸ ಮಾಡಿದ ಮತ್ತು ಪ್ರಸ್ತುತ ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ ಬೋಧಕವರ್ಗದ ಸದಸ್ಯರು**

### ಮೊದಲ ಪಾಠ: ಸೀಬೆ ಮರ ಏರುವುದು

ನವೆಂಬರ್ 1959ರ ಚಳಿಯಿಂದ ಕೂಡಿದ ಮುಂಜಾನೆ ಹಾಗೂ ಹುಲ್ಲುಹಾಸಿನಲ್ಲಿ ಇಬ್ಬನಿ ಇರುವಾಗಲೇ ಮೂರುವರೆ ವರ್ಷದ ಹುಡುಗ ಶಾಂತಿ ನಿಕೇತನದ ಪೂರ್ವ ಪ್ರಾಥಮಿಕ ಕಲಿಕಾ ಮತ್ತು ವಿನೋದ ಕೇಂದ್ರ, ಆನಂದ ಪಾಠಶಾಲೆಗೆ ಹೋಗಲು ಪ್ರಾರಂಭಿಸಿದನು.

ಶಾಲೆಗೆ ಸೇರಿದ ಮೊದಲ ದಿನ ಶಿಕ್ಷಕರಲ್ಲಿ ಒಬ್ಬರಾದ ಪ್ರೀತಿ ಮಾಶಿ ಹುಡುಗನಲ್ಲಿ ಶಾಲಾ ಆವರಣದ ಮಧ್ಯ ಭಾಗದಲ್ಲಿ ಬೆಳೆದು ನಿಂತಿರುವ ಸೀಬೆ ಹಣ್ಣಿನ ಮರವನ್ನು ಹತ್ತಲು ಹೇಳಿದರು. ಅದಕ್ಕೆ ಹುಡುಗ "ಇಲ್ಲ" ಎಂದು ಉತ್ತರಿಸಿದನು. ಅದಕ್ಕೆ ಪ್ರೀತಿ ಮಾಶಿ ಒಂದು ವಾರದ ಹಿಂದಷ್ಟೇ ಸೇರಿದ ಹುಡುಗ ಧೃವ ಈಗಾಗಲೇ ಮರ ಹತ್ತಲು ಕಲಿತಿದ್ದಾನೆ ಹಾಗೂ ನಾನೂ ಕೂಡಾ ತ್ವರಿತವಾಗಿ ಕಲಿಯಬೇಕೆಂದು ಹೇಳಿದರು.

ಎರಡು ಅಂತಸ್ತಿನ ಕಟ್ಟಡವಾದ ಆನಂದ ಪಾಠಶಾಲೆಯ ಸುತ್ತಮುತ್ತಲೂ ಮರಗಳು, ಸಣ್ಣ ಕೊಳ ಮತ್ತು ಜಗಳವಾಡಲು, ಓಡಾಡಲು ಆಟವಾಡಲು ಹಾಗೂ ಮಲಗಲು ಸಾಕಾಷ್ಟು ಸ್ಥಳಾವಕಾಶವಿತ್ತು. ಈ ಹುಡುಗ ಬೇಗನೆ ಮರ ಏರುವುದು, ಹಣ್ಣು ಕೀಳುವುದು, ಸಣ್ಣ ಸಸಿಗಳನ್ನು ಪೋಷಿಸುವುದು, ಹೂಗಳಿಂದ ಹಾರ ತಯಾರಿಸುವುದು, ಮಳೆಯಲ್ಲಿ ಆನಂದದಿಂದ ತೊಯ್ಯುವುದು, ಬೆಕ್ಕುಗಳು, ನಾಯಿಗಳು ಮತ್ತು ಪಕ್ಷಿಗಳಿಗೆ ಆಹಾರ ನೀಡುವುದು, ಠಾಗೋರರ ಕೆಲವು ಗೀತೆಗಳನ್ನು ಹಾಡುವುದು, ಕಾಗದದಲ್ಲಿ ಮತ್ತು ಇತರೆ ಬಟ್ಟೆಗಳಲ್ಲಿ ಚಿತ್ರ ರಚಿಸುವುದು, ಪದ್ಯಗಳನ್ನು ಹಾಡುವುದು ಮತ್ತು ಸ್ವಲ್ಪ ಮಟ್ಟಿಗೆ ಬರೆಯವುದನ್ನು ಕಲಿತೆನು.





### ಕಲಿಕೆಯ ವಲಯಗಳು

ಎರಡು ವರ್ಷಗಳ ನಂತರ ಈ ಹುಡುಗ ಠಾಗೋರರ ಶಾಲೆಯನ್ನು ಸೇರಿದನು. ಅಲ್ಲಿ ತರಗತಿಗಳು ಮರದ ಕೆಳಗಡೆ ನಡೆಯುತ್ತಿತ್ತು. ವಿದ್ಯಾರ್ಥಿಗಳು ಅರ್ಧ ವೃತ್ತಾಕಾರದಲ್ಲಿ ಕುಳಿತುಕೊಳ್ಳಬೇಕಿತ್ತು. ಪ್ರತಿಯೊಬ್ಬ ಶಿಕ್ಷಕರಿಗೂ "ಭೇಡಿ" ಎಂಬ ನಿರ್ದಿಷ್ಟವಾದ ಸ್ಥಳವಿತ್ತು. ಆದ್ದರಿಂದ ವಿದ್ಯಾರ್ಥಿಗಳು ಒಂದು ತರಗತಿಯಿಂದ ಇನ್ನೊಂದು ತರಗತಿಗೆ ನೆಗೆಯುತ್ತಿದ್ದರು. ಅರ್ಧ ವೃತ್ತಾಕಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆಗೆ ತನ್ನದೇ ಆದ ಅನುಕೂಲತೆಗಳಿತ್ತು - ಪ್ರತಿಯೊಬ್ಬನು ಎಲ್ಲರನ್ನೂ ನೋಡಬಹುದು ಆದರೆ ತುಂಟತನ ಮಾಡಲು ಮತ್ತು ಅಡಗಿಕೊಳ್ಳಲು ಅಷ್ಟೊಂದು ಸುಲಭವಾಗಿರಲಿಲ್ಲ. ವಿದ್ಯಾರ್ಥಿಗಳ ನಡುವೆ ತರಗತಿವಾರು ವಿಂಗಡನೆ ಇಲ್ಲದಿರುವುದು ಇಲ್ಲಿನ ಉತ್ತಮ ಅಂಶವಾಗಿತ್ತು. ಸ್ಥಳದಿಂದ ಸ್ಥಳಕ್ಕೆ ತೆಗೆದುಕೊಂಡು ಹೋಗಬಹುದಾದ ಕಪ್ಪು ಹಲಗೆಯನ್ನು ಇಲ್ಲಿ ಬಳಸಲಾಗುತ್ತಿತ್ತು. ಅದನ್ನು ವಿದ್ಯಾರ್ಥಿಗಳೇ ಪೀಠದ ಮೇಲೆ ತಂದು ಇಡುತ್ತಿದ್ದರು.

## ಸೇವೆಗಾಗಿ ಶಾಲೆ

ನಂತರದ ವರ್ಷಗಳಲ್ಲಿ ಈ ಹುಡುಗನನ್ನು ಸೇವಾ ವಿಭಾಗದ ಕಾರ್ಯದರ್ಶಿಯಾಗಿ ನೇಮಿಸಲಾಯಿತು. ವಿದ್ಯಾರ್ಥಿಗಳ ಗುಂಪನ್ನು ಒಟ್ಟುಗೂಡಿಸಿ ಸ್ವಯಂಸೇವಕರ ತಂಡವನ್ನು ರಚಿಸುವುದು ಹಾಗೂ ಮೂರು ತಿಂಗಳ ಅವಧಿಯಲ್ಲಿ ಶಾಂತಿನಿಕೇತನದಲ್ಲಿರುವ ಮನೆಗಳಿಗೆ ಭೇಟಿ ನೀಡಿ, ಅನುಪಯುಕ್ತ ವಸ್ತುಗಳನ್ನು ಸಂಗ್ರಹ ಮಾಡಿ, ಅದರಿಂದ ಉಪಯೋಗಿಸಬಹುದಾದ ವಸ್ತುಗಳನ್ನು ಆರಿಸಿ, ಸಂತಾಲ ಗ್ರಾಮದಲ್ಲಿ ಹಂಚುವುದು ಅವನ ಕಾರ್ಯವಾಗಿತ್ತು.

ಪ್ರತಿ ವಾರಾಂತ್ಯದಲ್ಲಿ ಇದನ್ನು ಮಾಡಲಾಗುತ್ತಿತ್ತು. ಇದು ಆಯಾಸಕರವಾದ ಕೆಲಸವಾಗಿತ್ತು. ಆದರೆ ಸಂತಾಲ ಗ್ರಾಮಸ್ಥರು ಇದನ್ನು ಇಷ್ಟಪಡುತ್ತಿರಲಿಲ್ಲವೆಂಬುದು ಸ್ಪಷ್ಟವಾಗಿ ಅರಿವಿಗೆ ಬಂದಿತು. ರಾತ್ರಿ ಶಾಲೆಯನ್ನು ಪುನರಾರಂಭಿಸುವುದು ಅವರಿಗೆ ಬೇಕಾಗಿತ್ತು.

**ಠಾಗೋರರ ಶಾಲೆಯ ಆಕರ್ಷಣೀಯ ಅಂಶಗಳು**

ಹುಡುಗ ದೊಡ್ಡವನಾದಂತೆ, ಅವನು ಠಾಗೋರರ ಶಾಲೆಯ ವಿಶೇಷತೆಗಳನ್ನು ಅರಿತುಕೊಳ್ಳಲು ಪ್ರಾರಂಭಿಸಿದನು. ಮೊದಲನೆಯದಾಗಿ, ಸಾಂಸ್ಕೃತಿಕ ಮತ್ತು ಚಿತ್ರಕಲೆಯ ತರಗತಿಗಳು ಹನ್ನೊಂದನೆಯ ತರಗತಿಯವರೆಗೆ ನಿರಂತರವಾಗಿ ಮುಂದುವರಿಯುತ್ತಿತ್ತು.

ಎರಡನೆಯದಾಗಿ, ತರಗತಿಯ ಹೊರಗೆ ವಿಷಯಗಳನ್ನು ಕಲಿಯುವುದು. ನಿಪುಣ ಭರತನಾಟ್ಯ ನೃತ್ಯಗಾರ್ತಿ ರುಕ್ಮಿಣಿದೇವಿ ಮತ್ತು ಅವರ ತಂಡ ಶಾಂತಿನಿಕೇತನಕ್ಕೆ ಭೇಟಿ ನೀಡಿದ್ದಾಗ ಶಾಲೆಯ ವಿದ್ಯಾರ್ಥಿಗಳೇ ಸಂಪೂರ್ಣವಾಗಿ ಕಾರ್ಯಕ್ರಮವನ್ನು ಸಂಘಟಿಸಿದ್ದರು.



ಈ ಹುಡುಗ ಅವರೊಂದಿಗೆ ಮೂರು ಪ್ರದರ್ಶನಗಳಿಗೆ ಸೂಕ್ತವಾದ ರಂಗಸ್ಥಳದ ಉದ್ದ, ಅಗಲ, ದೀಪಾಲಂಕಾರ/ಬೆಳಕಿನ ವ್ಯವಸ್ಥೆ ಮತ್ತು ಪಾರ್ಶ್ವಗಳನ್ನು ಚರ್ಚಿಸಿ, ಅದನ್ನು ಅದೇ ರೀತಿಯಲ್ಲಿ ಕಾರ್ಯಗತಗೊಳಿಸಿದನು.

ಪ್ರೇರೇಪಿಸುವ ಮೂರನೇ ವಿಷಯವೆಂದರೆ, ಎಲ್ಲಿಯಾದರೂ ಮತ್ತು ಯಾವುದೇ ಸಮಯದಲ್ಲಿ ನಡೆಯುವ ಚಟುವಟಿಕೆ ಅಥವಾ ಕಾರ್ಯಕ್ರಮಕ್ಕೆ ಆಹ್ವಾನವಿಲ್ಲದಿದ್ದರೂ ವಿದ್ಯಾರ್ಥಿಗಳಿಗೆ ಬರುವ ಸ್ವಾತಂತ್ರ್ಯವಿತ್ತು. ಶಾಲೆಯ ವಿದ್ಯಾರ್ಥಿಗಳನ್ನು ವಿಶೇಷವಾದ ಕಾಳಜಿ ಮತ್ತು ಪ್ರೀತಿಯಿಂದ ನೋಡಿಕೊಳ್ಳಲಾಗುತ್ತಿತ್ತು. ಯಾರೊಬ್ಬರೂ ಅವರ ಸ್ವಾತಂತ್ರ್ಯ ಮತ್ತು ದಿಟ್ಟತನಕ್ಕೆ ಆಕ್ಷೇಪಿಸುತ್ತಿರಲಿಲ್ಲ.



ನಾಲ್ಕನೇ ಆಕರ್ಷಣೆಯೆಂದರೆ ಪೈಪೋಟಿ ಇಲ್ಲದ ಸಂಸ್ಕೃತಿ ಶಾಂತಿನಿಕೇತನ ಸಂಸ್ಥೆಯ ಚೌಕಟ್ಟಿನಲ್ಲಿ ಬೇರೂರಿತ್ತು. ಇದರಿಂದಾಗಿ ಯಾವುದೇ ವಿದ್ಯಾರ್ಥಿಗೆ ವಿಷಯವಾರು ಸಾಧನೆಯ ಬಗ್ಗೆ ಒತ್ತಡ ಅಥವಾ ಖಿನ್ನತೆಯ ಭಾವನೆ ಉಂಟಾಗುತ್ತಿರಲಿಲ್ಲ. ಇದರಿಂದಾಗಿ ಪ್ರತಿಯೊಬ್ಬನೂ ಎಲ್ಲಾ ಕ್ಷೇತ್ರದಲ್ಲಿಯೂ ಒಂದೇ ರೀತಿಯಾಗಿ ಉತ್ತಮರಾಗಿರುವುದಿಲ್ಲ ಎಂದು ಗುರುತಿಸಬಹುದು ಮತ್ತು ಸುಲಭವಾಗಿ ಒಪ್ಪಿಕೊಳ್ಳಬಹುದು.





## ಪ್ರಪಂಚದ ಹಾಗೆ ಶಾಲೆ

ಠಾಗೋರರ ಶಾಲೆಯಲ್ಲಿ ಬೆಳೆಯಲು ಹಲವಾರು ಆಯಾಮಗಳಿದ್ದವು.

ಮೊದಲನೆಯದಾಗಿ, ಕಲಿಕೆಯ ವಿವಿಧ ಕ್ಷೇತ್ರಗಳಾದ ವಿಜ್ಞಾನ, ಕಲೆ, ಸಂಗೀತ, ಸಾಹಿತ್ಯ, ನಾಟಕದಿಂದ ಸಿನಿಮಾದವರೆಗೆ ಕಲಿಯಲು ಅವಕಾಶ ಕಲ್ಪಿಸಲಾಗಿತ್ತು.

ಎರಡನೆಯದಾಗಿ, ಒಂದು ಶಾಲೆಯ ಪರಿಕಲ್ಪನೆಯು ಹೇಳಿಕೊಳ್ಳಬಹುದಾದ ವಿಭಿನ್ನ ಅನುಭವವಾಗಿತ್ತು ಹಾಗೂ ಕಲಿಕೆಯ ಅನುಭವ ಕೇವಲ ಯಾಂತ್ರಿಕವಾಗಿರಲಿಲ್ಲ.

ಮೂರನೆಯದಾಗಿ, ಶಾಲೆ ಅಥವಾ ವಿಶ್ವವಿದ್ಯಾಲಯವು ಕಾರ್ಯಕ್ಷೇತ್ರಕ್ಕಿಂತ ಮಿಗಿಲಾಗಿ ಜೀವನ ಕ್ಷೇತ್ರವಾಗಿತ್ತು.

ನಾಲ್ಕನೆಯದಾಗಿ, ಶಾಲೆ, ವಿಶ್ವವಿದ್ಯಾಲಯ, ಸಂಸ್ಥೆಯ ಇತರ ಅಂಶಗಳು, ಸಮಾರಂಭಗಳು, ವಿಸ್ತರಣಾ ಕಾರ್ಯಕ್ರಮಗಳು ಇವೆಲ್ಲವೂ ಪರಸ್ಪರ ಪೂರಕವಾಗಿದ್ದವೇ ಹೊರತು ಬೇರೆ ಬೇರೆಯಾಗಿರಲಿಲ್ಲ.

1959 ನವೆಂಬರ್ ತಿಂಗಳಿನ ತಣ್ಣಗಿನ ಮುಂಜಾನೆಯಲ್ಲಿ ಹುಡುಗ ಆನಂದ ಪಾಠ ಶಾಲೆಗೆ ಮೊದಲ ಹೆಜ್ಜೆ ಇಟ್ಟಿದ್ದು ಹಲವು ವರ್ಷಗಳು ಕಳೆದಿವೆ. ಇಂದು ಅವನು ಠಾಗೋರರ ಶಾಲೆಯ ಮಾಂತ್ರಿಕ ದಿನಗಳನ್ನು ನಿನ್ನೆಯಷ್ಟೇ ನಡೆದಿರುವ ರೀತಿಯಲ್ಲಿ ನೆನಪಿಸಿಕೊಳ್ಳುತ್ತಾನೆ.

## ಸುಪ್ರಿಯಾ ಠಾಗೋರ್......

**(ಇವರ ಮುತ್ತಜ್ಜ ರವೀಂದ್ರನಾಥ್ ಠಾಗೋರರು ಸ್ಥಾಪಿಸಿದ ಶಾಲೆಯ ನಿವೃತ್ತ ಪ್ರಾಂಶುಪಾಲರು. ಬುಡಕಟ್ಟು ಮಕ್ಕಳ ಹಾಗೂ ಆ ಪ್ರದೇಶದ ಅನಾಥ ಮಕ್ಕಳ ಕಲಿಕೆಗಾಗಿ ಶಿಶು ತೀರ್ಥೋ ಎಂಬ ಶಾಲೆಯನ್ನು ಸ್ಥಾಪಿಸಿದ್ದಾರೆ ಹಾಗೂ ಪ್ರಸ್ತುತ ಅದನ್ನು ನಡೆಸಿಕೊಂಡು ಹೋಗುತ್ತಿದ್ದಾರೆ)**

ಗುರುದೇವರ ಸಿದ್ಧಾಂತಗಳು ಮತ್ತು ದೃಷ್ಟಿಕೋನವನ್ನು ಪ್ರಾಮಾಣಿಕವಾಗಿ ಅನುಸರಿಸಿಕೊಂಡು ಹೋದರೆ ಎಲ್ಲಾ ಮಕ್ಕಳಲ್ಲಿ ಸಂತಸದಾಯಕ ಕಲಿಕೆಯ ಅನುಭವವನ್ನು ಉಂಟುಮಾಡಬಹುದು. ಸಹಕಾರ, ಸಾಮರಸ್ಯ, ನೈಸರ್ಗಿಕ ಸೌಂದರ್ಯ ಮತ್ತು ಪ್ರೀತಿಯಿಂದ ಕೂಡಿದ ಪರಿಸರವನ್ನು ನಿರ್ಮಾಣ ಮಾಡುವುದರಿಂದ ಈ ಆನಂದವು ದೊರೆಯುತ್ತದೆ.



ಹುಟ್ಟಿದ ಪ್ರತಿಯೊಂದು ಮಗುವಿಗೂ ಸ್ವವಿವರಣೆ ನೀಡುವ ಮತ್ತು ವಿಚಾರ ಮಾಡುವ ಪ್ರಜ್ಞೆಯನ್ನು ಬೆಳೆಸಲು ಪ್ರೋತ್ಸಾಹ ನೀಡುವುದು ಪ್ರಾಮುಖ್ಯವಾಗಿದೆ.

ಠಾಗೋರರು ನಿಜವಾದ ಶಿಕ್ಷಕ, ತತ್ವಜ್ಞಾನಿ ಮತ್ತು ಇಂದಿನ ಪೀಳಿಗೆಗೆ ಮಾರ್ಗದರ್ಶಿ ಯಾಕೆಂದರೆ ಅವರು ಪುಸ್ತಕದ ಬದನೆಕಾಯಿಯಂತಹ ಕಲಿಕೆ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಹಾಕಲೇಬೇಕೆಂದು ನಂಬಿದ್ದರು. ಇದರಿಂದಾಗಿ ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಉನ್ನತ ಮಟ್ಟವನ್ನೂ, ಪ್ರಕೃತಿಯಿಂದ ಕಲಿಕೆಯನ್ನೂ ಹಾಗೂ ಆಧ್ಯಾತ್ಮಿಕ ಚಿಂತನೆಯನ್ನು ಸಾಧಿಸಬಹುದು.





## ಠಾಗೋರ್ - ಶಿಕ್ಷಣದ ತತ್ತ್ವಶಾಸ್ತ್ರ

**ಮಕ್ಕಳನ್ನು ಸಾಧ್ಯವಾದಷ್ಟು ಮುಕ್ತವಾಗಿರಲು ಬಿಡಿ**–ವಿದ್ಯಾರ್ಥಿಗಳಿಗೆ ಅನ್ವೇಷಿಸಲು, ಪ್ರಶ್ನಿಸಲು, ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಮತ್ತು ಮುಕ್ತವಾಗಿ ತಮ್ಮ ಕಲ್ಪನೆಯನ್ನು ಬಳಸಲು ಸ್ವಾತಂತ್ರ್ಯ ನೀಡಿ. ಪಥ ಭವನದಲ್ಲಿ ವಿದ್ಯಾರ್ಥಿಗಳ ಶಿಕ್ಷಣವನ್ನು ಸಂತೋಷದಾಯಕ ಚಟುವಟಿಕೆಯಾಗಿ ಶಿಕ್ಷಕರಿಂದ ಪ್ರೋತ್ಸಾಹಿಸಲಾಗುತ್ತದೆ.

**ಪಾಠಗಳನ್ನು ಆಹ್ಲಾದಿಸುವಂತೆ ಮಾಡಿ**–ಪಾಠ ಪ್ರವಚನಗಳನ್ನು ಭಯರಹಿತ ವಾತಾವರಣದಲ್ಲಿ ಹಾಗೂ ಸಾಧ್ಯವಾದಾಗಲೆಲ್ಲಾ ಹೊರಾಂಗಣದಲ್ಲಿ ನಡೆಸುವುದು. ಪ್ರಕೃತಿ ವೀಕ್ಷಣೆಯನ್ನು ನಿಯಮಿತ ಅಭ್ಯಾಸವಾಗಿ ಪಠ್ಯಕ್ರಮದಲ್ಲಿ ಆಳವಡಿಸಬೇಕು. ಋತುಮಾನಗಳನ್ನು ಆಚರಣೆಗಳ ಮೂಲಕ ಕಲಿಸುವುದು. ಅದು ಹೇಗೆಂದರೆ ವಸಂತಕಾಲದಲ್ಲಿ ಬಸಂತ್ ಉತ್ಸವ್, ಬೇಸಿಗೆ, ಮಳೆ ಮತ್ತು ಚಳಿಗಾಲದಲ್ಲಿ ಪೌಶ್ ಮೇಳ ಅಥವಾ ಸುಗ್ಗಿ ಹಬ್ಬದ ಆಚರಣೆ ಮಾಡುವುದು ಹಾಗೂ ಕಲಿಯುವುದು. ಯಾವುದೇ ಉತ್ಸವವನ್ನು ಆಚರಿಸಲು ಸೂಕ್ತವಾದ ಕಾರಣವಿದೆ ಮತ್ತು ಕಲಿಯುವ ಅವಕಾಶವಿದೆ

**ಪಾಠಗಳು ಜೀವನಕೇಂದ್ರಿತವಾಗಿರಲಿ**–ಮಕ್ಕಳು ತಮ್ಮ ಸುತ್ತಮುತ್ತಲಿನ ಪರಿಸರವನ್ನು ಅನ್ವೇಷಿಸಲಿ ಮತ್ತು ಕೃಷಿ, ಕೈಗಾರಿಕೆ, ಸಮುದಾಯ ಮತ್ತು ಜೀವನೋಪಾಯದ ಬಗ್ಗೆ ಪ್ರಾಯೋಗಿಕ ರೀತಿಯಲ್ಲಿ ಕಲಿಯಲಿ. ಅದು ಹೇಗೆಂದರೆ ಉಳುವುದು, ಬಿತ್ತನೆ, ಕೊಯ್ಲು, ಪಶುಸಂಗೋಪನೆಯಲ್ಲಿ ತೊಡಗಿಸಿಕೊಳ್ಳುವುದು, ಮುದ್ರಣ, ಕುಂಬಾರಿಕೆ, ಜವಳಿ, ಮರಗೆಲಸ ಮತ್ತು ಕಂಪ್ಯೂಟರ್‌ಗಳ ಬಗ್ಗೆ ನಡೆಯುವ ಕಾರ್ಯಾಗಾರಗಳಲ್ಲಿ ಭಾಗವಹಿಸುವ ಮೂಲಕ ಪ್ರಾಯೋಗಿಕ ಕಲಿಕೆ ಸಾಧ್ಯ.

**ದೈಹಿಕ ದಂಡನೆ ನಿಷಿದ್ಧ**–ದೈಹಿಕ ಶಿಕ್ಷೆ ಮತ್ತು ಅದರ ಪರಿಣಾಮದಿಂದ ಉಂಟಾಗುವ ಭಯದಿಂದ ಉತ್ತಮ ವಿದ್ಯಾರ್ಥಿಗಳನ್ನಾಗಿ ಮಾಡಬಹುದು ಎಂಬುದರಲ್ಲಿ ಠಾಗೋರರಿಗೆ ನಂಬಿಕೆ ಇರಲಿಲ್ಲ ಮತ್ತು ಸ್ವಯಂ ಆಡಳಿತವನ್ನು ಪರಿಚಯಿಸುವ ಉದಾಹರಣೆಗಳನ್ನು ನೀಡುವ ಮೂಲಕ ಅವರಲ್ಲಿರುವ ಅಶಿಸ್ತನ್ನು ಸರಿಪಡಿಸಲು ಸಾಧ್ಯ.





## ನಮ್ಮ ಶಾಲೆಗಳಿಗೆ ಮೌಲ್ಯಯುತ ಪಾಠಗಳು

ತಪ್ಪುಗಳ ಆತ್ಮಾವಲೋಕನ ಮಾಡುವುದಕ್ಕೆ ಉತ್ತೇಜನ ನೀಡಬೇಕು. ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯ ನೀಡಿ ಕಲಿಸಬೇಕು. ಇದರಿಂದ ಅವರಿಗೆ ಜವಾಬ್ದಾರಿಯ ಅರಿವಾಗುತ್ತದೆ. ಉದಾಹರಣೆಗೆ ಶಾಂತಿನಿಕೇತನದ ವಿಚಾರ ಸಭಾವನ್ನು ವಿದ್ಯಾರ್ಥಿಗಳೇ ನಡೆಸುತ್ತಿದ್ದರು. ಇಲ್ಲಿ ಅಶಿಸ್ತಿನ ವಿದ್ಯಾರ್ಥಿಗಳ ವರ್ತನೆಗೆ ಸಮರ್ಪಕವಾದ ತೀರ್ಪನ್ನು ವಿದ್ಯಾರ್ಥಿಗಳೇ ನೀಡುತ್ತಿದ್ದರು.

**ಪಂಚೇಂದ್ರಿಯಗಳಿಗೆ ಒತ್ತು ನೀಡಿ ತರಬೇತಿ**–ಅನುಭವಕ್ಕೆ ಒತ್ತು ನೀಡಿ ರುಚಿ, ವಾಸನೆ, ದೃಷ್ಟಿ, ಶ್ರವಣ ಮತ್ತು ಸ್ಪರ್ಶಜ್ಞಾನಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಮೇರುಗತಿಗೆ ಏರಿಸುವುದು. ಉದಾಹರಣೆಗೆ ಮಕ್ಕಳನ್ನು ಹಗಲಿನಲ್ಲಿ ಮತ್ತು ಚಂದ್ರನ ಬೆಳಕಿನಲ್ಲಿ ಹೊರಸಂಚಾರ ನಡೆಸುವುದು, ದೃಶ್ಯ ಮತ್ತು ಸ್ಪರ್ಶಗಳ ಮೂಲಕ ಕಲಿಕೆಗೆ ಪ್ರೋತ್ಸಾಹ ನೀಡುವುದು, ಪ್ರಾದೇಶಿಕ ಆಹಾರ ಮೇಳ, ವಿಜ್ಞಾನ ಮೇಳ ಮತ್ತು ಗಣಿತ ಮೇಳವನ್ನು ಆಯೋಜನೆ ಮಾಡಲೇಬೇಕು ಇದಕ್ಕೆ ವಿನಾಯತಿ ಇರಲೇಬಾರದು.

**ಸೃಜನಾತ್ಮಕ ಆಟಗಳು**–ವಿದ್ಯಾರ್ಥಿಗಳಲ್ಲಿರುವ ಸ್ವಾಭಾವಿಕ ಕುತೂಹಲವನ್ನು ಸಕ್ರಿಯಗೊಳಿಸಲು, ತೊಡಗಿಸಿಕೊಳ್ಳಲು ಮತ್ತು ಅವರ ಮನಸ್ಸು ಜಾಗೃತಗೊಳಿಸಲು ಸೃಜನಾತ್ಮಕ ಮಾದರಿಯ ಆಟ ಸಹಕಾರಿ. ಮನಸ್ಸಿನಲ್ಲಿ ಮಾಡುವ ಲೆಕ್ಕ, ಕಾಗದದ ಮೂಲಕ ಮಾಡುವ ರೇಖಾಗಣಿತ, ವಿಜ್ಞಾನ, ಇತಿಹಾಸ ಮತ್ತು ಇತರ ವಿಷಯಗಳನ್ನು ಆಟದ ಮೂಲಕ ಅರ್ಥ ಮಾಡಿಕೊಳ್ಳುವುದು.

**ಚರ್ಚೆ ಮತ್ತು ಸಂವಾದ**–"ಕಂಠಪಾಠ"ದ ಕಲಿಕೆಯ ಒತ್ತಡವನ್ನು ತೆಗೆದುಹಾಕಿ. ಉದಾಹರಣೆಗೆ ವಿದ್ಯಾರ್ಥಿಗಳ ಗುಂಪು ರಚಿಸಿ, ಚರ್ಚೆ ಮತ್ತು ಸಂವಾದಗಳನ್ನು ಪ್ರೋತ್ಸಾಹಿಸುವುದರಿಂದ ಕಲಿಕೆ ಉಂಟಾಗುತ್ತದೆ.

**ಸಾಮಾನ್ಯ ವಿಮರ್ಶೆಗಳು**–ಕಿರಿಯ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಪರೀಕ್ಷೆ ಇಲ್ಲದೇ ವಿದ್ಯಾರ್ಥಿಗಳ ಕಲಿಕೆಯನ್ನು ನಿರಂತರ ಮೌಲ್ಯಮಾಪನ ಮಾಡುವುದು.

ಮಾಹಿತಿ ಒದಗಿಸಿದವರು – ಸುಪ್ರಿಯ ಠಾಗೋರ್, ಶಾಂತಿನಿಕೇತನ.

## ಟಾಗೋರ್‌ರ ಆದರ್ಶಗಳಿಗೆ ಇಂದಿರುವ ಪ್ರಾಮುಖ್ಯತೆ

### ಅಮರ್ತ್ಯ ಸೇನ್‌ರವರು "ಟಾಗೋರ್ ಮತ್ತು ಅವರ ಭಾರತ"ದಲ್ಲಿ ಬರೆದಿದ್ದಾರೆ

ಭಾರತದ ಹಲವು ಸಾಮಾಜಿಕ ಮತ್ತು ಆರ್ಥಿಕ ತೊಂದರೆಗಳಿಗೆ ಪ್ರಾಥಮಿಕ ಶಿಕ್ಷಣದಲ್ಲಿನ ಕೊರತೆಯೇ ಮೂಲಭೂತ ಕಾರಣವೆಂದು ಟಾಗೋರರು ಗುರುತಿಸಿದ್ದರು.

"ನನ್ನ ದೃಷ್ಟಿಯಲ್ಲಿ ಇಂದು ಭಾರತದಲ್ಲಿ ದುಃಖದ ಗೋಪುರವು ಉಂಟಾಗಲು ಇರುವ ಏಕೈಕ ಕಾರಣ ಶಿಕ್ಷಣ ಇಲ್ಲದಿರುವುದು. ಜಾತಿ ವಿಭಾಗಗಳು, ಧಾರ್ಮಿಕ ಘರ್ಷಣೆಗಳು, ಕೆಲಸದಲ್ಲಿ ವಿಮುಖತೆಗಳು, ಅನಿಶ್ಚಿತ ಆರ್ಥಿಕ ಪರಿಸ್ಥಿತಿಗಳು - ಇವೆಲ್ಲವೂ ಒಂದು ಅಂಶದಿಂದ ಕೇಂದ್ರಿತವಾಗಿದೆ ಅದುವೇ ಶಿಕ್ಷಣವಿಲ್ಲದಿರುವುದು".

ದೇಶದಾದ್ಯಂತ ಶಿಕ್ಷಣಕ್ಕೆ ವ್ಯಾಪಕವಾದ ಅವಕಾಶವಿದ್ದರೂ ವಿಶೇಷವಾಗಿ ಕೆಲವೇ ಶಾಲೆಗಳಿರುವ ಗ್ರಾಮೀಣ ಪ್ರದೇಶದಲ್ಲಿ ಉಲ್ಲಾಸಮಯ ಮತ್ತು ಸಂತೋಷಕರ ಶಿಕ್ಷಣವನ್ನು ನೀಡಬೇಕೆಂಬುದು ಟಾಗೋರರ ಕಾಳಜಿಯಾಗಿತ್ತು. ಅವರಿಗೆ ಶಾಲೆಯ ಬಗ್ಗೆ ಹೆಚ್ಚಾಗಿ ಬೇಸರವಿತ್ತು ಮತ್ತು ಪದವಿ ಪಡೆಯಬೇಕೆಂಬ ಆಸಕ್ತಿ ಅವರಿಗಿರಲಿಲ್ಲ. ಪ್ರಾರಂಭಿಕ ಹಂತದಲ್ಲಿಯೇ ಅವರು ಶಾಲೆಯಿಂದ ಹೊರಗುಳಿದಿದ್ದರು. ಹುಡುಗರು ಮತ್ತು ಹುಡುಗಿಯರಿಗೆ ಶಾಲೆಗಳನ್ನು ಹೆಚ್ಚು ಆಕರ್ಷಣೀಯವಾಗಿ ಮಾಡುವುದು ಹೇಗೆ? ಮತ್ತು ಅದರಿಂದ ಕಲಿಕೆ ಉತ್ತಮವಾಗುವುದು ಹೇಗೆ? ಎಂಬುದನ್ನು ಅವರು ಸವಿಸ್ತಾರವಾಗಿ ಬರೆದರು. ಅವರೇ ಶಾಂತಿನಿಕೇತನದಲ್ಲಿ ನಡೆಸುತ್ತಿದ್ದ ಸಹ ಶಿಕ್ಷಣ ಶಾಲೆಯು ಹಲವು ಪ್ರಗತಿಪರ ಲಕ್ಷಣಗಳನ್ನು ಹೊಂದಿತ್ತು. ಇಲ್ಲಿ ಶಿಸ್ತಿನ ಬದಲು ಸ್ವಯಂಪ್ರೇರಣೆ ಮತ್ತು ಸ್ಪರ್ಧಾತ್ಮಕ ಶ್ರೇಷ್ಠತೆ ಬದಲು ಬೌದ್ಧಿಕ ಕುತೂಹಲವನ್ನು ಬೆಳಸಲು ಒತ್ತು ನೀಡಿದ್ದರು.



## ಇಂದಿನ ಭಾರತ

ಟಾಗೋರರ ಪ್ರಕಾರ ಅನಕ್ಷರತೆ ಮತ್ತು ಶಿಕ್ಷಣದ ನಿರ್ಲಕ್ಷ್ಯವೇ ಭಾರತದ ಸಾಮಾಜಿಕ ಹಿಂದುಳಿಯುವಿಕೆಯ ಮುಖ್ಯ ಕಾರಣ. ಜೊತೆಗೆ ದೇಶದ ಆರ್ಥಿಕ ಅಭಿವೃದ್ಧಿ ಹೊಂದುವ ಸಾಧ್ಯತೆಗಳಿಗೆ ಮತ್ತು ಸಾಧಿಸಲು ದೊಡ್ಡ ತೊಡಕಾಗಿದೆ. ಇದನ್ನು ತಮ್ಮ ಗ್ರಾಮೀಣಾಭಿವೃದ್ಧಿ ಕುರಿತಾದ ಬರಹಗಳಲ್ಲಿ ಸ್ಪಷ್ಟವಾಗಿ ಬರೆದಿದ್ದಾರೆ. ತುರ್ತಾಗಿ ಬಡತನ ನಿವಾರಣೆ ಮಾಡಬೇಕೆಂಬ ಮನೋಭಾವ ಮತ್ತು ಮಾಡಲೇಬೇಕೆಂಬ ಹೆಚ್ಚಿನ ಬದ್ಧತೆಯನ್ನು ಹೊಂದಬೇಕೆಂದು ಕೂಡ ಅವರು ಬಲವಾಗಿ ತಿಳಿದಿದ್ದರು.

ಅದೇ ಸಂದರ್ಭದಲ್ಲಿ ಟಾಗೋರರಿಗೆ ಭಾರತದಲ್ಲಿನ ಪ್ರಜಾಪ್ರಭುತ್ವ ವ್ಯವಸ್ಥೆಯ ಉಳಿವು ನಿಸ್ಸಂದೇಹವಾಗಿ ತೃಪ್ತಿ ತಂದಿತ್ತು. ಮಾಧ್ಯಮ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಸ್ವಾತಂತ್ರ್ಯಾನಂತರದ ದಿನಗಳಲ್ಲಿನ ಭಾರತದ ರಾಜಕೀಯ ವ್ಯವಸ್ಥೆಗಳ ನಿರ್ವಹಣೆಯು ವ್ಯವಸ್ಥಿತವಾಗಿತ್ತು.

ಯಂತ್ರಗಳು ಜನರ ಮೇಲೆ ಪ್ರಾಬಲ್ಯ ಬೀರಬಾರದು ಎಂದು ಟಾಗೋರರು ಕಾಳಜಿ ಹೊಂದಿದ್ದರು. ಆದರೆ ಅವರು ಆಧುನಿಕ ತಂತ್ರಜ್ಞಾನದ ಉತ್ತಮ ಬಳಕೆಗೆ ವಿರೋಧಿಯಾಗಿರಲಿಲ್ಲ. "ಯಂತ್ರಗಳ ಮೇಲಿನ ನೈಪುಣ್ಯ" ವನ್ನು ಅವರ "ನಾಗರಿಕತೆಯ ಬಿಕ್ಕಟ್ಟು" ಪುಸ್ತಕದಲ್ಲಿ ಬರೆದಿದ್ದಾರೆ. ಬ್ರಿಟಿಷ್‌ರ ಕ್ರೋಢೀಕೃತ ವಿಶಾಲವಾದ ಸಾಮ್ರಾಜ್ಯದಲ್ಲಿ ಅವರ ಸಾರ್ವಭೌಮತ್ವವು ಮೊಹರು ಮಾಡಿದ ಪುಸ್ತಕದಂತೆ, ಅಸಹಾಯಕ ದೇಶಕ್ಕೆ ಇತರರ ಪ್ರವೇಶವನ್ನು ನಿರಾಕರಿಸುವಂತಿತ್ತು. ರವೀಂದ್ರನಾಥರು ಪರಿಸರದ ಕುರಿತು ಆಳವಾದ ಆಸಕ್ತಿಯನ್ನು ಹೊಂದಿದ್ದರು. ಅದರಲ್ಲೂ ವಿಶೇಷವಾಗಿ ಅರಣ್ಯ ನಾಶದ ಬಗ್ಗೆ ಕಾಳಜಿ ಹೊಂದಿದ್ದರು ಮತ್ತು 1928 ರಲ್ಲಿ ವನಮಹೋತ್ಸವ (ಸಸಿ ನೆಡುವ ಹಬ್ಬ) ವನ್ನು ಪ್ರಾರಂಭಿಸಿದ್ದರು.

# ನನ್ನ ದೇಶಕ್ಕೆ

ಎಲ್ಲಿ ಮನವು ನಿರ್ಭಯದಿ ತಲೆಯನೆತ್ತಿ ನಿಲುವುದೋ,

ಎಲ್ಲಿ ಜ್ಞಾನ ಸುಧಾಪಾನ ಎಲ್ಲರಿಗೂ ಸಿಗುವುದೋ,

ಎಲ್ಲಿ ಮನೆಯ ಅಡ್ಡಗೋಡೆ ಇಲ್ಲದೆ ವಿಶಾಲವೋ,

ಎಲ್ಲಿ ಮಾತು ಸತ್ಯದಾಳದಿಂದ ಹೊಮ್ಮಿ ಬರುವುದೋ,

ಎಲ್ಲಿ ಸತತ ಕರ್ಮ ಪೂರ್ಣಸಿದ್ಧಿ ಪಡೆದು ಮೆರೆವುದೋ,

ಎಲ್ಲಿ ತಿಳಿವು ಕಟ್ಟಳೆಯ ಮಳಲ ತೊರೆದು ಹರಿವುದೋ,

ಎಲ್ಲಿ ನೀನು ನಮಗೆ ಧೈರ್ಯ ಎಲ್ಲಿ ನೀನು ನಮಗೆ ಸ್ಥೈರ್ಯ,

ವರವಿಕಾಸಗೊಳಿಸಿ ಸದಾ ಅಭ್ಯುದಯವ ಕೋರುವೆಯೋ,

ಆ ಸ್ವತಂತ್ರ ಸ್ವರ್ಗಕೆ ನಮ್ಮ ನಾಡು ಏಳಲೇಳಲೇಳಲಿ.

ಜನರು ಸ್ವಾತಂತ್ರ್ಯದಿಂದ ಬದುಕಲು ಸಾಧ್ಯವಾಗಬೇಕು ಎಂಬುದೇ ಠಾಗೋರರಿಗೆ ಅತ್ಯಂತ ಮಹತ್ವದ್ದಾಗಿತ್ತು. ಅವರ ಮನೋಧೋರಣೆಯನ್ನು ರಾಜಕೀಯ ಮತ್ತು ಸಂಸ್ಕೃತಿ, ರಾಷ್ಟ್ರೀಯತೆ ಮತ್ತು ಅಂತಾರಾಷ್ಟ್ರೀಯತೆ, ಸಂಪ್ರದಾಯ ಮತ್ತು ಆಧುನಿಕತೆಯೆಡಗಿನ ನಂಬಿಕೆಯ ಬೆಳಕಲ್ಲಿ ನೋಡಬೇಕಾಗುತ್ತದೆ.

–ಅಮರ್ತ್ಯ ಸೇನ್, ಠಾಗೋರ್ ಮತ್ತು ಅವರ ಭಾರತ





## ಸ್ಮರಣೆ

1. ಶ್ರೀ ಉಮೇಶ್ ಪಿ, ಮುಖ್ಯಸ್ಥರು, ಜಿಲ್ಲಾ ಸಂಸ್ಥೆ, ಅಜೀಮ್ ಪ್ರೇಮ್‌ಜೀ ಪ್ರತಿಷ್ಠಾನ, ಮಂಡ್ಯ ಇವರು ಸೂಕ್ತ ಸಹಕಾರ ಮತ್ತು ಪ್ರೋತ್ಸಾಹವನ್ನು ನೀಡಿರುತ್ತಾರೆ.
2. ಶ್ರೀ ಎಮ್. ಕೆ. ಶಂಕರನಾರಾಯಣ ಭಟ್ಟ, ಇವರು ಕನ್ನಡದ ಕರಡು ಪ್ರತಿಯನ್ನು ನೋಡಿ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ.
3. ಶ್ರೀ ಶ್ರೀಧರ್. ಎ. ರವರು ಠಾಗೋರರ ಕವನಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡುವಲ್ಲಿ ಮತ್ತು ಪುಸ್ತಕದ ವಿಮರ್ಶೆಯನ್ನು ಮಾಡಿ ಸೂಕ್ತ ಸಲಹೆ ನೀಡಿರುತ್ತಾರೆ.
4. ಶ್ರೀ ಗೋಪಾಲಕೃಷ್ಣ ಐ. ಮತ್ತು ಶಿವಶಂಕರ್ ಬಿ. ಪಿ, ಅಜೀಮ್ ಪ್ರೇಮ್‌ಜೀ ಪ್ರತಿಷ್ಠಾನ, ಜಿಲ್ಲಾ ಸಂಸ್ಥೆ, ಮಂಡ್ಯ ಇವರು ಕನ್ನಡಕ್ಕೆ ಭಾಷಾಂತರಿಸುವ ಗುರುತರವಾದ ಕೆಲಸವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಿರುತ್ತಾರೆ.
5. ಪ್ರೊ. ವೇಣುಗೋಪಾಲರವರ 'ನನ್ನ ದೇಶಕ್ಕೆ' ಕವನವನ್ನು ಈ ಪುಸ್ತಕದಲ್ಲಿ ಬಳಸಿಕೊಳ್ಳಲಾಗಿದೆ.

## Acknowledgements

1. **Swati Ghosh, Tagore Researcher, Santiniketan** - for sharing a wealth of information on Rabindranath Tagore's life and vision.
2. **Supriyo Tagore, retired Principal of Visva-Bharati** - for outlining ways in which Rabindranath Tagore's vision of education can be realised by educators.
3. **Tapan Kumar Basak, Head of Rabindra Bhavan Archives, Visva-Bharati, Santiniketan** - for permitting us to use photographs from the Archives.
4. **Nilanjan Choudhury, Leah Verghese, Soumita Basu and Akashi Kaul, Azim Premji Foundation** - for their editorial inputs.
5. **Ashok Sircar, former student of Patha Bhawan, Santiniketan and Faculty Member at Azim Premji University**- for his invaluable guidance and for sharing his wonderful memories of Santiniketan.


## Images

1. **Introduction:** Kolkata Bourne 1860: http://sesquicentinnial.blogspot.in/2010/04/early-life-of-rabindranath-tagore-contd.html.
2. **Santiniketan and My Philosophy of Education, Inspired by Tagore: WW Pearson, and Where The Mind Is Without Fear:** Mukul Chandra Dey's early watercolour sketches of the Ashram have been used in the book with permission from his grandson, Satyasree Ukil.
3. **My Observations and Views:** Rabindranath Tagore at the Galerie Pigalle, Paris, 1930 Courtesy - http://www.antarasdiary.com/photography-rabindranath-tagore/ Courtesy - http://www.outlookindia.com/article.aspx?262326.
4. **I Cannot Remember My Mother:** Woman with her child in her lap: A 1913 illustration by Asit Kumar Haldar for "The Beginning", a prose-poem in The Crescent Moon.
5. **My Poetry:** The waterfall of Amida behind the Kiso Road by Katsushika Hokusai http://commons.wikimedia.org/wiki/Category:Katsushika_Hokusai
6. All the other photographs in the book are from the Rabindra Bhavan Archives, Visva-Bharati, Santiniketan.

## Bibliography


1. Amartya Sen, *The Argumentative Indian*. Published by Penguin, 2005.
2. Amartya Sen, *Tagore and His India - Nobelprize.org. 2 Nov 2011* URL: http://www.nobelprize.org/nobel_prizes/literature/laureates/1913/ tagore-article.html.
3. Dilip Basu, *Biography of Satyajit Ray (1921-1992)*. URL: http://satyajitray.ucsc.edu/ biography.html.
4. K. M. O'Connell, (2003) *'Rabindranath Tagore on education'*, The Encyclopaedia of Informal Education, URL: http://www.infed.org/thinkers/tagore.htm.
5. Leonard Elmhirst, *The Poet and The Plowman*. Published by Visva-Bharati Publishing Department, 1975.
6. Uma Das Gupta, ed., *Rabindranath Tagore - My Life In My Words*. Published by Penguin India, 2006.
7. Uma Das Gupta, ed., *The Oxford India Tagore: Selected Writings on Education and Nationalism.* Published by Oxford University Press, 2009.
8. WW Pearson, *Santiniketan*. Published by Macmillan,1916.




# ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯ

ಅಜೀಮ್ ಪ್ರೇಮ್‌ಜೀ ಪ್ರತಿಷ್ಠಾನವು ಒಂದು ಲಾಭರಹಿತ ಸಂಸ್ಥೆಯಾಗಿದ್ದು, ಭಾರತದಲ್ಲಿ ಗುಣಾತ್ಮಕ ಶಿಕ್ಷಣ ಮತ್ತು ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಆಳವಾದ, ಬೃಹತ್ ಪ್ರಮಾಣದ ಮತ್ತು ಸಾಂಸ್ಥೀಕರಣದ ಮೂಲಕ ದೀರ್ಘಾವಧಿ ಪರಿಣಾಮ ಬೀರಲು ಕಾರ್ಯನಿರ್ವಹಿಸುತ್ತಿದೆ. ಇದಲ್ಲದೆ ಪ್ರತಿಷ್ಠಾನವು ಮಕ್ಕಳ ಆರೋಗ್ಯ, ಪೌಷ್ಟಿಕಾಂಶ, ಆಡಳಿತ ಮತ್ತು ಪರಿಸರ ಮುಂತಾದ ಅಭಿವೃದ್ಧಿ ಕ್ಷೇತ್ರಗಳಲ್ಲಿಯೂ ತೊಡಗಿಸಿಕೊಂಡಿದೆ. ಅಜೀಮ್ ಪ್ರೇಮ್‌ಜೀ ಪ್ರತಿಷ್ಠಾನವು ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಒಂದು ದಶಕದ ಕಾಲ ಕೆಲಸ ಮಾಡಿದ ಅನುಭವ ಮತ್ತು ಕಲಿಕೆಯ ಆಧಾರದ ಮೇಲೆ ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯವು ನೆಲೆಗೊಂಡಿದೆ.

ಭಾರತವು ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಸಾಬೀತುಪಡಿಸಿದ ಸಿದ್ಧಾಂತ ಮತ್ತು ಜ್ಞಾನ, ಸಮರ್ಥ ಹಾಗೂ ಪುನರ್ ಅವಲೋಕಿಸುವ ವೃತ್ತಿಪರರ ಕೊರತೆಯನ್ನು ಎದುರಿಸುತ್ತಿದ್ದು, ಈ ಸವಾಲುಗಳನ್ನು ಸಮರ್ಪಕವಾಗಿ ಎದುರಿಸಲು ಪ್ರತಿಷ್ಠಾನವು ಅಜೀಮ್ ಪ್ರೇಮ್‌ಜೀ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದೆ. ವಿಶ್ವವಿದ್ಯಾಲಯವು ಹೊಸ ಪ್ರತಿಭೆಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಜ್ಞಾನವನ್ನು ಸೃಷ್ಟಿಸುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದೆ. ಈ ಜ್ಞಾನ ಮತ್ತು ಪ್ರತಿಭೆಗಳು ವೇಗವರ್ಧಕವಾಗಿ ಕಾರ್ಯನಿರ್ವಹಿಸುವುದರ ಮೂಲಕ ಶಿಕ್ಷಣ ಮತ್ತು ಅದಕ್ಕೆ ಸಂಬಂಧಿಸಿದ ಅಭಿವೃದ್ಧಿ ಕ್ಷೇತ್ರಗಳಲ್ಲಿ ಸುಸ್ಥಿರ ಬೆಳವಣಿಗೆಯನ್ನು ಸಾಧಿಸುವುದಾಗಿದೆ. ಈ ವಿಶ್ವವಿದ್ಯಾಲಯಕ್ಕೆ ತನ್ನದೇ ಆದ ಸಾಮಾಜಿಕ ಕಳಕಳಿಯಿದ್ದು, ಭಾರತದಲ್ಲಿ ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಏಕೈಕ ವಿಶ್ವವಿದ್ಯಾಲಯವಾಗಿದೆ. ಈ ಮೂಲಕ ನ್ಯಾಯ ಸಮ್ಮತ, ಸಮಾನ, ಮಾನವೀಯ ಹಾಗೂ ಸುಸ್ಥಿರ ಸಮಾಜ ನಿರ್ಮಾಣಕ್ಕಾಗಿ ಮಹತ್ತರ ಕೊಡುಗೆ ನೀಡುವ ಉದ್ದೇಶವನ್ನು ಹೊಂದಿರುತ್ತದೆ.

**"ವ್ಯಕ್ತಿ ಮತ್ತು ಚಿಂತನೆಗಳು"** ಎಂಬ ಶೀರ್ಷಿಕೆಯ ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದ ಈ ಹೆಜ್ಜೆ, ನಮ್ಮ ಜ್ಞಾನವನ್ನು ವಿಸ್ತರಿಸುತ್ತಲೇ ಇರುವ ಸಮಾಜ ಸುಧಾರಕರು, ಕಲಾಕಾರರು, ವಿಜ್ಞಾನಿಗಳು, ತತ್ವಜ್ಞಾನಿಗಳು ಮತ್ತು ಶಿಕ್ಷಣತಜ್ಞರ-ಕ್ರಿಯೆ, ಬದುಕು ಮತ್ತು ಚಿಂತನೆಗಳನ್ನು ಪರಿಶೋಧಿಸುವ ಪ್ರಯತ್ನವಾಗಿದೆ. ಇಂತಹ ಪ್ರಕ್ರಿಯೆಯ ಮೂಲಕ, ನಮ್ಮ ತತ್ತ್ವ ಮತ್ತು ದೃಷ್ಟಿಗಳಿಗೆ ರೂಪ ಕೊಟ್ಟ ಚಿಂತನೆಗಳನ್ನು ಚರ್ಚಿಸುವ, ಅರ್ಥೈಸಿಕೊಳ್ಳುವ ಮತ್ತು ಅವುಗಳೊಂದಿಗೆ ತೊಡಗಿಸಿಕೊಳ್ಳುವ ವೇದಿಕೆಯೊಂದನ್ನು ಒದಗಿಸಲಾದೀತು ಎಂಬುದು ನಮ್ಮ ಆಶಯ. ಈ ಮಾಲಿಕೆಗಳ ಸರಣಿಯನ್ನು ನಾವು ರವೀಂದ್ರನಾಥ ಠಾಗೂರರ ಶಿಕ್ಷಣತತ್ವ ಮತ್ತು ಚಿಂತನೆಗಳ ಚಿತ್ರರೂಪಿಕೆಯ ಮೂಲಕ ಆರಂಭಿಸುತ್ತಿದ್ದೇವೆ. ರವೀಂದ್ರರು ಕಾಲವನ್ನು ಮೀರಿ ನಿಂತ ಶಿಕ್ಷಣತಜ್ಞ, ಆದುದರಿಂದಲೇ ಅವರ ಚಿಂತನೆಗಳು ಅಂದಿನಷ್ಟೇ ಇಂದಿಗೂ ಪ್ರಸ್ತುತ.

ಸಾಲು ಸಾಲು ಶಿಕ್ಷಕರಿಂದ ಕಲಿಸಲ್ಪಡುವಾಗ ಅಥವಾ ಒಂದು ಶಾಲೆಯಿಂದ ಇನ್ನೊಂದು ಶಾಲೆಗೆ ವರ್ಗಾವಣೆಗೊಳ್ಳುತ್ತಿದ್ದಾಗ ತಾನು ಯಾವುದೆ ರೀತಿಯ ಸಂತಸ ಅನುಭವಿಸುತ್ತಿರಲಿಲ್ಲವೆಂದು ತಮ್ಮ ಬರಹಗಳಲ್ಲೆಲ್ಲಾ ರವೀಂದ್ರರು ವ್ಯಕ್ತಪಡಿಸಿದ್ದಾರೆ. ತಮ್ಮ ಶಿಕ್ಷಣ ಮಾರ್ಗವನ್ನು ಅವರ ಬದುಕಿನ ಅನುಭವಗಳಿಂದಲೇ ಕಟ್ಟಿಕೊಂಡವರು. ವಿದ್ಯಾರ್ಥಿಗಳ ಚಿತ್ತಗಳನ್ನು ಮುಕ್ತಗೊಳಿಸಿ, ಅವರು ವರ್ಗ-ವರ್ಣಗಳ ಭೇದವಿಲ್ಲದೆ ಎಲ್ಲ ಮನುಷ್ಯರನ್ನು ಗೌರವಿಸುವ ಕ್ರಿಯಾಶೀಲ ಐಕ್ಯದೆಡೆಗೆ ಸಾಗುವಂತೆ ಮಾಡಬೇಕು ಎಂಬ ಉದ್ದೇಶದಿಂದಲೇ ರವೀಂದ್ರರು ಶಾಂತಿನಿಕೇತನವನ್ನು ಪ್ರಾರಂಭಿಸಿದ್ದು.



Azim Premji University

Pixel Park, B Block, PES-IT Campus
Electronic City, Hosur Road
Beside NICE Road, Bangalore 560100
http://www.azimpremjiuniversity.edu.in



13 3456